Approved by the Department of Public Instruction

# ಕರ್ನಾಟಕ ಸ್ಕೌಟ್ ಮತ್ತು ಗೈಡ್

# The Karnataka Scout and Guide

Vol. 70 April - June 1987 No. 1-3




PUBLISHED BY

**The Bharat Scouts & Guides, Karnataka State**

Prof. P. Sivashankar Circle, Fort, Bangalore-560 002

**Annual Subscription Rs. 10/- only**

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಸಂಪುಟ ೭೦ | ಏಪ್ರಿಲ್—ಜೂನ್, ೧೯೮೭ | ಸಂಚಿಕೆ ೧-೨

## ಹಾಸನ ಜಿಲ್ಲಾ ಸ್ಕೌಟ್ಸ್ ಗೈಡ್ಸ್ ಮೇಳ : ಕಬ್ಸ್ ಮತ್ತು ಬುಲ್ ಬುಲ್ಸ್ ಉತ್ಸವ

ಕರ್ನಾಟಕ ರಾಜ್ಯದ ಲೋಕೋಪಯೋಗಿ ಮತ್ತು ನೀರಾವರಿ ಸಚಿವ ಶ್ರೀ ಹೆಚ್. ಡಿ. ದೇವೇಗೌಡ ಅವರು ಫೆ. ೭ ರಂದು ಚನ್ನರಾಯ ಪಟ್ಟಣದಲ್ಲಿ ಈ ಮೇಳವನ್ನು ಉದ್ಘಾಟಿಸಿದರು. ಶಾಸಕ ಶ್ರೀ ಎನ್. ಗಂಗಾಧರ್ ಅವರು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ವಿಶೇಷ ಜಿಲ್ಲಾಧಿಕಾರಿ ಶ್ರೀ ಪಿ. ವೆಂಕಟಪ್ಪನವರು ಆಗಮಿಸಿದ್ದರು.

ಪ್ರಾರ್ಥನೆಯ ನಂತರ ಜಿಲ್ಲಾ ಆಯುಕ್ತ (ಸ್ಕೌ) ಶ್ರೀ ಸಿ. ಎಂ. ಚಂದ್ರಶೇಖರ್ ಅವರು ಜಿಲ್ಲಾ ಸಂಸ್ಥೆಯ ಪರವಾಗಿಯೂ, ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಹಾಗೂ ಪುರಸಭಾಧ್ಯಕ್ಷ ಶ್ರೀ ಕೆ. ಎಸ್. ಕೃಷ್ಣೇಗೌಡ ಅವರು ಸ್ಥಳೀಯ ಸಂಸ್ಥೆಯ ಪರವಾಗಿಯೂ ಸ್ವಾಗತಿಸಿದರು. ಈ ಸಮಾರಂಭದ ಮತ್ತು ಜಿಲ್ಲಾ ಸಂಸ್ಥೆಯ ವರದಿಯನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಕೈಲಾಸ್ ಶಂಕರ್ ಓದಿದರು. ಸ್ಕೌಟ್ ಮತ್ತು ಗೈಡ್‌ಗಳಿಂದ ಮನೋರಂಜನ ಕಾರ್ಯಕ್ರಮದ ನಂತರ, ಮೇಳಕ್ಕೆ ಶುಭ ಕೋರಿ ಬಂದಿದ್ದ ಸಂದೇಶಗಳನ್ನು ಜಿಲ್ಲಾ ಸಹಾಯಕ ಆಯುಕ್ತ (ಸ್ಕೌ) ಡಾ|| ಹೆಚ್. ಎಂ. ಮೋಹನ್ ಕುಮಾರ್ ಓದಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಹೆಚ್. ಎಂ. ಗೌಡಯ್ಯನವರು ವಂದನಾರ್ಪಣೆ ಮಾಡಿದರು. ಸಹಾಯಕ ಸಂಘಟನಾ ಆಯುಕ್ತ (ಸ್ಕೌ) ಶ್ರೀ ಸಿ. ಹೆಚ್. ಚನ್ನಬಸವಯ್ಯನವರು ಸಮಾರಂಭವನ್ನು ನಿರ್ದೇಶಿಸಿದರು.

### ಶಿಬಿರಾಗ್ನಿ

ರಾತ್ರಿ ೯ ಗಂಟೆಗೆ ಶ್ರೀ ಆದಿ ಚುಂಚನಗಿರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಕೆ. ಗಂಗೇಗೌಡರ ಅಧ್ಯಕ್ಷತೆಯಲ್ಲಿ ಹೇಮಾವತಿ ನಾಲಾ ವೃತ್ತದ ಸೂ|| ಇಂಜಿನೀಯರ್ ಶ್ರೀ ಆರ್. ಪಿ. ನಂಜಪ್ಪನವರು ಶಿಬಿರಾಗ್ನಿ ಕೂಟವನ್ನು ಉದ್ಘಾಟಿಸಿದರು. ಲೋಕೋಪಯೋಗಿ ಇಲಾಖೆಯ ಸ|| ಕಾ|| ಇಂಜಿನಿಯರ್ ಶ್ರೀ ಓಬಯ್ಯ, ಅಬ್ಕಾರಿ ಇನ್‌ಸ್ಪೆಕ್ಟರ್ ಶ್ರೀ ಹೆಚ್. ಎಸ್. ಮೂರ್ತಿ, ಪೋಲೀಸ್ ಸಬ್‌ಇನ್ಸ್‌ಪೆಕ್ಟರ್ ಶ್ರೀ ಸಿ. ಎಸ್. ರುದ್ರಯ್ಯನವರು ಮುಖ್ಯ ಅತಿಥಿಗಳಾಗಿ ಬಂದಿದ್ದರು. ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್ಸ್‌ಗಳಿಂದ ವಿವಿಧ ಆಕರ್ಷಣೀಯ ಶಿಬಿರಾಗ್ನಿ ಕಾರ್ಯಕ್ರಮಗಳು ನಡೆದವು. ಶ್ರೀ ಸಿ. ಹೆಚ್. ಚನ್ನಬಸವಯ್ಯನವರು ಕೂಟವನ್ನು ನಿರ್ದೇಶಿಸಿದರು.

### ರೂಟ್ ಮಾರ್ಚ್

ಫೆ. ೮ರ ಭಾನುವಾರ ಬೆಳಿಗ್ಗೆ ೮-೩೦ ಕ್ಕೆ ನಗರದ ಪ್ರಮುಖ ಬೀದಿಗಳಲ್ಲಿ ಸ್ಕೌಟ್, ಗೈಡ್, ಕಬ್ ಮತ್ತು ಬುಲ್ ಬುಲ್‌ಗಳಿಂದ ರೂಟ್ ಮಾರ್ಚ್ ನಡೆಸಲಾಯಿತು. ಬೆಳಿಗ್ಗೆ ೯-೩೦ ರಿಂದ ೧೨ ರವರೆಗೆ ಹಾಗೂ ಮಧ್ಯಾಹ್ನ ೨-೩೦ ರಿಂದ ೪ ರವರೆಗೆ ಇಂಪ್ರವೈಸ್ಡ್ ಷೆಲ್ಟರ್, ಧ್ವಜಸ್ಥಂಭ ನಿರ್ಮಾಣ, ಪೆಟ್ರೋಲ್ ಕುಕಿಂಗ್,

ಪ್ರಥಮ ಚಿಕಿತ್ಸೆ, ಸ್ಥಳದಲ್ಲೇ ಕರಕುಶಲ ವಸ್ತುಗಳ ತಯಾರಿಕೆ, ಕಬ್ ಗ್ರೀಟಿಂಗ್, ಬುಲ್ ಬುರ್ ಮ್ಯಾಜಿಕ್ ಟ್ರೇ, ಗ್ರೀಟಿಂಗ್, ಮ್ಯಾಡ್ ಮ್ಯಾಡ್ ಗೇಮ್, ಮಾರ್ಚ್ ಪಾಸ್ಟ್ ಮುಂತಾದ ಸ್ಟಾಂಡರ್ಡ್ ಜಡ್ಜಿಂಗ್ ಟೆಸ್ಟ್‌ಗಳನ್ನು ಜಿಲ್ಲಾ ತರಬೇತಿ ಆಯುಕ್ತರುಗಳಾದ ಶ್ರೀ ಹೆಚ್. ಸತ್ಯನಾರಾಯಣ ರಾವ್ (ಸ್ಕಾ), ಶ್ರೀಮತಿ ಛಾಯ (ಗೈ) ಮತ್ತು ಸಹಾಯಕ ಸಂಘಟನಾ ಆಯುಕ್ತ (ಸ್ಕಾ) ಶ್ರೀ ಸಿ. ಹೆಚ್. ಚನ್ನಬಸವಯ್ಯನವರು ವಿವರಣೆ ನೀಡಿದರು. ಸಂಜೆ ೬-೩ಂಕ್ಕೆ ಜಿಲ್ಲಾ ಮೇಳದ ಮುಕ್ತಾಯ ಸಮಾರಂಭ ನಡೆಸಲಾಯಿತು.

## ಮುಕ್ತಾಯ ಸಮಾರಂಭ

ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮುಖ್ಯ ಆಯುಕ್ತ ಹಾಗೂ ಭಾರತ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ವಿ. ಪಿ. ದೀನದಯಾಳು ನಾಯ್ಡು ಅವರು ಅಧ್ಯಕ್ಷತೆ ವಹಿಸಿದ್ದರು. ರಾಜ್ಯ ಆಯುಕ್ತೆ (ಗೈ) ಮತ್ತು ಶಾಸನ ಸಭಾ ಸದಸ್ಯೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಪ್ರಶಸ್ತಿ ಪತ್ರಗಳ ವಿತರಣೆ ಮಾಡಿದರು. ತಹಸೀಲ್ದಾರ್ ಶ್ರೀ ಟಿ. ಆರ್. ಬೋರೇ ಗೌಡರು ಬಹುಮಾನಗಳ ವಿತರಣೆ ಮಾಡಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರೂ, ಪುರಸಭಾಧ್ಯಕ್ಷರೂ ಆದ ಶ್ರೀ ಕೆ. ಎಸ್. ಕೃಷ್ಣೇಗೌಡರು ನೆನಪಿನ ಕಾಣಿಕೆಗಳ ವಿತರಣೆ ಮಾಡಿದರು.

## ಮುಖ್ಯ ಅತಿಥಿಗಳು

ರಾಜ್ಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೆ. ಬಿ. ಷಣ್ಮುಖಪ್ಪ ಮತ್ತು ರಾಜ್ಯ ಸಂಘಟನಾ ಆಯುಕ್ತ (ಸ್ಕಾ) ಶ್ರೀ ಎಸ್. ಆದಿಕೇಶವಲು ಅವರು ಮುಖ್ಯ ಅತಿಥಿಗಳಾಗಿ ಭಾಷಣ ಮಾಡಿದರು. ಶ್ರವಣಬೆಳಗೊಳದ ಜೈನ ಮಠದ ಶ್ರೀ ಶ್ರೀ ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳು ಆಶೀರ್ವಚನ ನೀಡಿದರು. ಸ್ಥಳೀಯ ಸಂಸ್ಥೆಯ ಸಹಾಯಕ ಆಯುಕ್ತ (ಸ್ಕಾ) ಡಾ|| ಮೋಹನ್ ಕುಮಾರ್ ಅವರು ಸ್ವಾಗತಿಸಿದರೆ, ಜಿಲ್ಲಾ ಕಾರ್ಯದರ್ಶಿ ಶ್ರೀ ಕೈಲಾಸ್ ಶಂಕರ್ ಮೇಳದ ವರದಿ ಮಾಡಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಹೆಚ್. ಎಂ. ಗೌಡಯ್ಯ ವಂದನಾರ್ಪಣೆ ಮಾಡಿದರು. ಜಿಲ್ಲಾ ಆಯುಕ್ತ (ಸ್ಕಾ) ಶ್ರೀ ಹೆಚ್. ಸತ್ಯನಾರಾಯಣ ರಾವ್ ಸಭೆಯನ್ನು ನಿರ್ದೇಶಿಸಿದರು.

## ಶಿಬಿರಾಗ್ನಿ

ಭೋಜನದ ನಂತರ ರಾತ್ರಿ ೯ ಘಂಟೆಗೆ ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯ ಅಸಿಸ್ಟೆಂಟ್ ಎಕ್ಸಿಕ್ಯುಟೀವ್ ಇಂಜನಿಯರ್ ಶ್ರೀ ಜವರೇ ಗೌಡರ ಅಧ್ಯಕ್ಷತೆಯಲ್ಲಿ ಶಿಬಿರಾಗ್ನಿ ಕೂಟವನ್ನು ನಡೆಸಲಾಯಿತು. ಸಹಾಯಕ ವಿದ್ಯಾಧಿಕಾರಿ ಶ್ರೀ ಕೆ. ರಾಘವೇಂದ್ರ ಉದ್ಘಾಟಿಸಿದರು. ಹೇಮಾವತಿ ನಾಲಾ ವಿಭಾಗದ ಇಂಜನಿಯರ್ ಶ್ರೀ ಗೋವಿಂದರಾಜ ಶೆಟ್ಟಿ, ವರ್ತಕರ ಸಂಘದ ಅಧ್ಯಕ್ಷ ಶ್ರೀ ಸಿ. ಆರ್. ಜಯಚಂದ್ರ ಶೆಟ್ಟಿ, ಆದಿ ಚುಂಚನಗಿರಿ ಪ್ರಥಮ ದರ್ಜೆ ಕಾಲೇಜಿನ ರಾಜ್ಯ ಶಾಸ್ತ್ರ ವಿಭಾಗದ ಮುಖ್ಯಸ್ಥ ಶ್ರೀ ಜಿ. ಬಿ. ಶಿವರಾಜು, ವಾಣಿಜ್ಯೋದ್ಯಮಿ ಶ್ರೀ ಎ. ಎಸ್. ಕೃಷ್ಣಪ್ಪನವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀ ಸಿ. ಹೆಚ್. ಚನ್ನಬಸವಯ್ಯನವರು ಶಿಬಿರಾಗ್ನಿ ಕೂಟದ ನಾಯಕರಾಗಿದ್ದರು.

## ಸರ್ವಧರ್ಮ ಪ್ರಾರ್ಥನೆ

ಫೆ. ೯ ರಂದು ಬೆಳಿಗ್ಗೆ ೭ ಗಂಟೆಗೆ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ಬೆಳಿಗ್ಗೆ ೯ ಗಂಟೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಸಮ್ಮೇಳನ, ೧೦ ಗಂಟೆಗೆ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮ್ಮೇಳನವನ್ನು ಜಿಲ್ಲಾ ಆಯುಕ್ತ (ಸ್ಕಾ) ಶ್ರೀ ಸಿ. ಎಂ. ಚಂದ್ರಶೇಖರ್ ಅವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಸರ್ವಶ್ರೀ ಕೈಲಾಸ್ ಶಂಕರ್, ಸತ್ಯನಾರಾಯಣರಾವ್, ಸಿ. ಹೆಚ್. ಚನ ಬಸವಯ್ಯ ಮತ್ತು ಶ್ರೀಮತಿ ಛಾಯಾ ಮುಖ್ಯ ಅತಿಥಿಗಳಾಗಿದ್ದರು.

ವಿವಿಧ ಇಲಾಖೆಗಳ ಅಧಿಕಾರಿಗಳು, ಶಿಕ್ಷಕರು ಮತ್ತು ಪುರ ಪ್ರಮುಖರು ಮೇಳದ ಕೆಲಸಕಾರ್ಯಗಳಲ್ಲಿ ಭಾಗ ವಹಿಸಿ ಸೇವೆ ಸಲ್ಲಿಸಿದರು. ನಗರದ ನಾಗರೀಕರು ಮೇಳವನ್ನು ಬಂದು ನೋಡಿ ಆನಂದಿಸಿ ಸಂಸ್ಥೆಯ ಕಾರ್ಯ ಚಟುವಟಿಕೆಗಳನ್ನು ಪ್ರಶಂಸಿಸಿದರು.

# ಬೇಡನ್ ಪೊವೆಲ್ ಜನ್ಮ ದಿನಾಚರಣೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮಂಡ್ಯ ಜಿಲ್ಲಾ ಸಂಸ್ಥೆಯು ೧೯೮೭ರ ಫೆ ೨೨ರಂದು ಸಂಸ್ಥೆಯ ಸಂಸ್ಥಾಪಕ ಬೇಡನ್ ಪೊವೆಲ್‌ರ ಜನ್ಮದಿನಾಚರಣೆಯನ್ನೂ, ಸ್ಕೌಟ್ಸ್ ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್ ಚಟುವಟಿಕೆಗಳ ಶಿಬಿರವನ್ನು ಏರ್ಪಡಿಸಿತ್ತು.

ಜಿಲ್ಲಾ ಸಂಸ್ಥೆಯ ಅಧ್ಯಕ್ಷ ಹಾಗೂ ಜಿಲ್ಲಾಧಿಕಾರಿ ಶ್ರೀ ಜಿ. ಕೆ. ಸಂಗಮೇಶ್ವರ್, ಐ.ಎ.ಎಸ್. ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಬಹುಮಾನ ವಿತರಣೆ ಮಾಡಿ ಸಂಸ್ಥೆಯ ಚಟುವಟಿಕೆಗಳ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದರು.

ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀಮತಿ ಇಕ್ಬಾಲ್ ಉನ್ನೀಸ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಅಂದು ೨೫೦ಕ್ಕೂ ಹೆಚ್ಚು ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್‌ಗಳು ಭಾಗವಹಿಸಿ ಅಂದು ಪೂರ್ಣ ಚಟುವಟಿಕೆಗಳಲ್ಲಿ ತೊಡಗಿದ್ದರು. ಆ ಮಕ್ಕಳು ಅಂದು ಸರ್ಕಾರಿ ಆಸ್ಪತ್ರೆಗೆ ಭೇಟಿ ನೀಡಿ ರೋಗಿಗಳಿಗೆ ಹಣ್ಣುಗಳನ್ನು ವಿತರಿಸಿದರು.

## ಚಿಕ್ಕಮಗಳೂರು

ಚಿಕ್ಕಮಗಳೂರಿನ ಸೆಂಟ್ ಜೋಸೆಫ್ ಬಾಲಿಕಾ ಪ್ರೌಢಶಾಲಾ ಆವರಣದಲ್ಲಿ ಫೆ. ೨೨ ರಂದು ಲಾರ್ಡ್ ಮತ್ತು ಲೇಡಿ ಬೇಡನ್ ಪೊವೆಲ್‌ರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಜಿಲ್ಲಾ ಆಯುಕ್ತ (ಸ್ಕೌ) ಶ್ರೀ ಎ. ಡಿ. ಚಂದ್ರಶೇಖರ್ ಅವರು ಅಧ್ಯಕ್ಷತೆ ವಹಿಸಿ ಪ್ರಶಸ್ತಿ ಪತ್ರಗಳನ್ನು ವಿತರಿಸಿದರು.

ಜಿಲ್ಲಾ ಸ್ಕೌಟ್ಸ್ ತರಬೇತಿ ಕಮಿಷನರ್ ಶ್ರೀ ಎಂ. ಹಲಗಪ್ಪನವರು ಬೇಡನ್ ಪೊವೆಲ್‌ರ ಜೀವನ ಚರಿತ್ರೆಯನ್ನು ಮಕ್ಕಳಿಗೆ ವಿವರಿಸಿದರು. ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ನಾರಾಯಣ ಶೆಟ್ಟಿ, (ಸ್ಕೌ) ಮತ್ತು ಶ್ರೀಮತಿ ವಿಜಯ ಲಕ್ಷ್ಮಿ (ಗೈ) ಅವರು ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಿದ್ದರು.

ಸುಮಾರು ೩೭೫ ಸ್ಕೌಟ್ಸ್, ಗೈಡ್ಸ್, ೨೦ ಸ್ಕೌಟರ್ಸ್ ಗೈಡರ್ಸ್ ಈ ಸಮಾರಂಭದಲ್ಲಿ ಭಾಗವಹಿಸಿದ್ದರು.

ಜಿಲ್ಲಾ ಕಾರ್ಯದರ್ಶಿ ಅಣ್ಣಪ್ಪನವರು ಸ್ವಾಗತಿಸಿದರೆ, ಸಹಾಯಕ ಜಿಲ್ಲಾ ಆಯುಕ್ತ ಶ್ರೀ ಷಡಾಕ್ಷರಿಯವರು ವಂದಿಸಿದರು.

ಫೆ. ೨೫ ರಂದು ಸಂಜೆ ಸೆಂಟ್ ಜೋಸೆಫ್ ಬಾಲಿಕಾ ಪ್ರೌಢಶಾಲೆಯಲ್ಲಿ ಲಾರ್ಡ್ ಮತ್ತು ಲೇಡಿ ಬೇಡನ್ ಪೊವೆಲ್ ಅವರ ಹುಟ್ಟುಹಬ್ಬವನ್ನು ಆಚರಿಸಿದರು.

ಶ್ರೀಮತಿ ಎಂ. ಎಲ್. ನಾಗಸುಂದರ ಅವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭಕ್ಕೆ ಡಾ|| ಮೀರಾ ಎನ್. ಮಹಲೆ ಅವರು ಮುಖ್ಯ ಅತಿಥಿಗಳಾಗಿದ್ದರು. ಸಿಸ್ಟರ್ ಬರ್ನೆಡೀನ್ ಅವರು ಬಹುಮಾನ ವಿತರಣೆ ಮಾಡಿದರು. ಸಿಸ್ಟರ್ ಜೇಮ್ಸ್ ಅವರು ಶಿಬಿರಾಗ್ನಿ ಉದ್ಘಾಟಿಸಿದರು. ಸರ್ವಶ್ರೀ ಎಂ. ಹಲಗಪ್ಪ, ನಾರಾಯಣ ಶೆಟ್ಟಿ, ಶ್ರೀಮತಿ ವಿಜಯಲಕ್ಷ್ಮಿ ಅವರು ಉಪಸ್ಥಿತರಿದ್ದರು.

ಶಾಲೆಯ ೧೧ ಯುನಿಟ್‌ನ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಸಹಾಯಕ ಜಿಲ್ಲಾ ಆಯುಕ್ತೆ (ಗೈ) ಶ್ರೀಮತಿ ಟಿ. ಕೆ. ಶಕುಂತಲಾ ಮತ್ತು ಶ್ರೀಮತಿ ವೆರೋನಿಕಾ ಲೋಬೋ ಅವರು ಕಾರ್ಯಕ್ರಮದ ವ್ಯವಸ್ಥೆ ಮಾಡಿದ್ದರು.

## ಅಣ್ಣಿಗೇರಿ

ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಅಣ್ಣಿಗೇರಿಯಲ್ಲಿ ತಾಲೂಕಿನ ಸ್ಥಳೀಯ ಸಂಸ್ಥೆಯವರು ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಜೊತೆಯಲ್ಲಿ ಫೆ. ೨೪ ರಂದು ಸ್ಕೌಟ್ ಪಿತಾಮಹ ಲಾರ್ಡ್ ಬೇಡನ್ ಪೊವೆಲ್‌ರ ಜನ್ಮದಿನೋತ್ಸವವನ್ನೂ, ಸಾಹಿತ್ಯ

ಪರಿಷತ್ತಿನ ಅಮೃತ ಮಹೋತ್ಸವ ಸಮಾರಂಭವನ್ನೂ ನಡೆಸಿದರು.

ಸ್ಥಳೀಯ ಸಹಾಯಕ ಶಿಕ್ಷಣಾಧಿಕಾರಿ ಶ್ರೀ ಟಿ. ಮಾರ ನಾಯಕ್ ಅವರ ಅಧ್ಯಕ್ಷತೆಯಲ್ಲಿ ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಜಿ. ಬಿ. ಮನ್ವಾಚಾರ ಅವರು ಉದ್ಘಾಟಿಸಿದರು. ಗದಗದ ಎಸ್. ಕೆ. ವಿ. ಎಸ್. ಆರ್. ಪದವಿ ಪೂರ್ವ ಕಾಲೇಜಿನ ಪ್ರಾಚಾರ್ಯ ಶ್ರೀ ಕೆ. ಬಿ. ತಳಗೇರಿ ಅತಿಥಿಗಳಾಗಿದ್ದರು. ಬೆಳಗಾವಿ ವಿಭಾಗದ ಸಹಾಯ ಕರಾಜ್ಯ ಆಯುಕ್ತ (ಸ್ಕೌ) ಶ್ರೀ ಸಿ. ಎಸ್. ಪಾಟೀಲರು ಸ್ಕೌಟ್ ಧ್ವಜಾರೋಹಣ ಮಾಡಿದರು. ಗದಗದ ನವೋದಯ ಪತ್ರಿಕೆಯ ಸಂಪಾದಕ ಶ್ರೀ ಹೆಚ್. ಆರ್. ಕಿದಿಯೂರ ಮತ್ತು ನವಲಗುಂದದ ಶ್ರೀ ಎನ್. ಹಿರೇಗೌಡರ ಅವರು ದಳಗಳ ನಿರೀಕ್ಷಕರಾಗಿದ್ದರು.

ಗದಗ ಜಿಲ್ಲಾ ಆಯುಕ್ತ (ಸ್ಕೌ) ಡಾ|| ಬಿ. ಎಂ. ಆಲೂರ ಮತ್ತು ಗದಗ ಜಿಲ್ಲಾ ಆಯುಕ್ತೆ (ಗೈ) ಶ್ರೀಮತಿ ಕೆ. ವಿ. ಸಂಕನಗೌಡ್ರ ಅವರು ದೀಕ್ಷಾ ಸಮಾರಂಭದಲ್ಲಿ ಭಾಗವಹಿಸಿದ್ದರು.

## ಗದಗ

ಗದಗ ಜಿಲ್ಲಾ ಸಂಸ್ಥೆಯ ವತಿಯಿಂದ ಬೇಡನ್ ಪೊವೆಲ್ ದಂಪತಿಗಳ ಜಯಂತೋತ್ಸವವನ್ನು ಅಲ್ಲಿನ ಗುರು ಭವನದಲ್ಲಿ ಜಿಲ್ಲಾ ಸಂಸ್ಥೆಯ ಅಧ್ಯಕ್ಷ ಹಾಗೂ ನಗರ ಪ್ರಾಧಿಕಾರ ಸಮಿತಿ ಅಧ್ಯಕ್ಷ ಶ್ರೀ ವಿ. ಆರ್. ಮಾಳಗೊಂಡ ಅವರ ಅಧ್ಯಕ್ಷತೆಯಲ್ಲಿ ಫೆ. ೨೨ ರಂದು ಬೆಳಗಾವಿ ವಿಭಾಗದ ಸಹಾಯಕ ರಾಜ್ಯ ಆಯುಕ್ತ (ಸ್ಕೌ) ಶ್ರೀ ಸಿ. ಎಸ್. ಪಾಟೀಲರು ಧ್ವಜಾರೋಹಣ ಮಾಡಿದರು. ಸ್ಥಳೀಯ ಪುರಸಭಾ ಕಾಲೇಜಿನ ಪ್ರಾಚಾರ್ಯ ಶ್ರೀ ಬಿ.ಕೆ. ಗುಡಿಮತ್ತು ಶ್ರೀ ವಿ.ಕೆ. ಕೌತಾಳರಿಂದ ಭಾಷಣಗಳಾದವು. ಜಿಲ್ಲಾ ಕಾರ್ಯದರ್ಶಿ ಶ್ರೀ ವಿ. ಎಸ್. ಪಾಟೀಲರು ವಂದನಾರ್ಪಣೆ ಮಾಡಿದರು. ಮಕ್ಕಳಿಗೆ ಸಿಹಿ ವಿತರಣೆ ನಂತರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಮನೋರಂಜಕ ಕಾರ್ಯಕ್ರಮಗಳು ಜರುಗಿದವು.

## ತುಮಕೂರು

ತುಮಕೂರು ಜಿಲ್ಲಾ ಸಂಸ್ಥೆಯವರು ಕಳೆದ ಫೆ. ೨೧ ಮತ್ತು ೨೨ ರಂದು ಸಂಸ್ಥಾಪಕರ ದಿನ ಮತ್ತು ಯೋಚನಾ ದಿನ ಆಚರಿಸಿದರು.

ಫೆ. ೨೧ ರಂದು ಕ್ವಿಜ್, ಪ್ರಬಂಧ ಬರವಣಿಗೆ ಮತ್ತು ಉತ್ತಮ ಚಟುವಟಿಕೆ ಕಾರ್ಯಗಳನ್ನು ನಡೆಸಿ, ೨೨ ರಂದು ಸ್ಕೌಟ್, ಗೈಡ್ ಕ್ರಾಫ್ಟ್, ಧ್ವಜ ಸ್ಥಂಭ ರಚನೆ, ಪ್ರಥಮ ಚಿಕಿತ್ಸೆ, ಸಿಗ್ನಲಿಂಗ್, ಮೆರವಣಿಗೆ ಮಾಡಿದ ನಂತರ ಬಿ. ಪಿ. ಜನ್ಮದಿನೋತ್ಸವ ಆಚರಿಸಲಾಯಿತು. ಸಂಜೆ ಭವ್ಯ ಶಿಬಿರಾಗ್ನಿ ನಡೆಸಲಾಯಿತು.

## ಆನೇಕಲ್

ಆನೇಕಲ್ಲಿನ ಸರ್ಕಾರಿ ಪ್ರೌಢಶಾಲೆಯ ಭಾಸ್ಕರ ಸ್ಕೌಟ್ ದಳದವರು ಶ್ರೀ ಎ್. ಶ್ರೀನಿವಾಸನ್ ಅವರ ನೇತೃತ್ವದಲ್ಲಿ ಫೆ. ೨೨ ರಂದು ಸ್ಥಾಪಕರ ದಿನಾಚರಣೆಯನ್ನು ಆಚರಿಸಿದರು.

ಬೆಳಿಗ್ಗೆ ೯ ಗಂಟೆಗೆ ಊರಿನ ಪ್ರಮುಖ ಬೀದಿಗಳಲ್ಲಿ ರಾಷ್ಟ್ರ ಧ್ವಜ, ಸ್ಕೌಟ್ ಧ್ವಜ ಮತ್ತು ಬೇಡನ್ ಪೊವೆಲ್‌ರ ಭಾವಚಿತ್ರಗಳೊಂದಿಗೆ ಶಾಂತಿ ಘೋಷಣೆಗಳನ್ನು ಕೂಗುತ್ತ ಮೆರವಣಿಗೆ ನಡೆಸಲಾಯಿತು.

"ಆಫ್ರಿಕಾ ನಿಧಿ" ಎಂದು ಹಣ ಸಂಗ್ರಹಿಸಿ ೩೦೮ ರೂ. ಗಳನ್ನು ಆಫ್ರಿಕಾ ನಿಧಿ ಅಧ್ಯಕ್ಷ ಪ್ರಧಾನಿ ಶ್ರೀ ರಾಜೀವ್ ಗಾಂಧಿಯವರಿಗೆ ಕಳಿಸಲಾಯಿತು. ಊರಿನ ಬೀದಿಗಳನ್ನು ಸ್ವಚ್ಛಗೊಳಿಸಿದ ಸ್ಕೌಟ್‌ಗಳು ಸ್ಥಾಪಕರ ದಿನಾಚರಣೆಯನ್ನು ಸಾರ್ಥಕಗೊಳಿಸಿದರು.

ಈ ಎಲ್ಲ ಕಾರ್ಯಕ್ರಮಗಳ ನಂತರ ಕಿರಿಯ ಕಾಲೇಜಿನ ಆವರಣದಲ್ಲಿ ಧ್ವಜಾರೋಹಣದೊಂದಿಗೆ ನಡೆದ ಸಭೆಯ ಅಧ್ಯಕ್ಷತೆಯನ್ನು ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಶ್ರೀ ವಿ. ವಿ. ರಾಘವನ್ ವಹಿಸಿ ಬಹುಮಾನ ವಿತರಣೆ ಮಾಡಿದರು. ಉಪಾಧ್ಯಾಯ ಶ್ರೀ ಜಿ. ರಾಜಣ್ಣನವರು ಬೇಡನ್ ಪೊವೆಲ್‌ರ ಭಾವಚಿತ್ರ ಅನಾವರಣ ಮಾಡಿದರು. ಚಿ|| ಮೋಹನ್ ಕುಮಾರ್ ಸ್ವಾಗತಿಸಿದರೆ ಚಿ|| ಗುರು ನಾಗೇಶ್ ವಂದನೆ ಸಲ್ಲಿಸಿದ ನಂತರ ಸ್ಕೌಟ್‌ಗಳು ಮನರಂಜನೆ ಕಾರ್ಯಕ್ರಮ ನಡೆಸಿದ ನಂತರ ರಾಷ್ಟ್ರಗೀತೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ಹೊನ್ನಾವರ

ಹೊನ್ನಾವರದ ಸ್ಥಳೀಯ ಸಂಸ್ಥೆಯವರು ಫೆ. ೨೨ರಂದು ಅಲ್ಲಿನ ನ್ಯೂ ಇಂಗ್ಲಿಷ್ ಶಾಲೆಯಲ್ಲಿ ಬೇಡನ್ ಪೊವೆಲ್ ದಿನಾಚರಣೆಯನ್ನು ವಿಜೃಂಭಣೆಯಿಂದ ಆಚರಿಸಿದರು.

ಮುಂಜಾನೆ ೯ ಗಂಟೆಗೆ ಹೊನ್ನಾವರ ಸಂಸ್ಥೆಯ ಕಾರ್ಯದರ್ಶಿ ಶ್ರೀ ಬಿ. ಡಿ. ಫರ್ನಾಂಡಿಸ್ ಅವರು ಧ್ವಜಾರೋಹಣ ಮಾಡಿದರು.

ಮಧ್ಯಾಹ್ನ ೪ ಗಂಟೆಗೆ ನಡೆದ ಕಾರ್ಯಕ್ರಮಕ್ಕೆ ಜನ ಪ್ರಿಯ ನ್ಯಾಯವಾದಿ ಶ್ರೀ ಡಿ. ಎ. ಕಾಮತ್ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದು, ಸ್ಕೌಟ್ ಸಂಸ್ಥೆಯು ಮಕ್ಕಳಲ್ಲಿ ಶಿಸ್ತು ಬೆಳೆಸಲು ಶ್ರಮಿಸುತ್ತಿದೆ ಎಂದು ಹೇಳಿ ಬೇಡನ್ ಪೊವೆಲರ ಉತ್ತಮ ಗುಣಗಳನ್ನು ನಾವು ಮೈಗೂಡಿಸಿಕೊಂಡು ದಿವಂಗತರಿಗೆ ಗೌರವ ಸೂಚಿಸಿ, ಮಕ್ಕಳು ಉತ್ತಮ ನಾಗರಿಕರಾಗಲು ಶಿಕ್ಷಕರು, ಪಾಲಕರ ಶ್ರಮವು ಮುಖ್ಯವಾದದ್ದು ಎಂದು ಹೇಳಿ, ಉತ್ತಮ ಗುಣಗಳು ಮಕ್ಕಳಲ್ಲಿ ಬರಬೇಕಾದರೆ ಸ್ಕೌಟನಿಂದ ಮಾತ್ರ ಸಾಧ್ಯವೆಂದು ಅಭಿಪ್ರಾಯ ಪಟ್ಟರು.

ಸ್ಥಳೀಯ ಸಂಸ್ಥೆ ಅಧ್ಯಕ್ಷ ಶ್ರೀ ಜೆ. ಅಬ್ರಹಾಮ್ ಅವರು ಸ್ಕೌಟ್ ಪ್ರತಿಜ್ಞೆಯನ್ನು ಪುನರುಚ್ಛರಿಸುತ್ತಾ, ಸ್ಕೌಟ್ ನಿಯಮಗಳಿಗೆ ಬದ್ಧರಾಗಿ ನಡೆಯಬೇಕೆಂದು ಕರೆಕೊಟ್ಟರು. ಸುಮಾರು ೩೦೦ ಸ್ಕೌಟ್ ಮತ್ತು ಗೈಡ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಹಿಂದೆ ನಡೆಸಿದ್ದ ಚಿತ್ರಕಲಾ ಸ್ಪರ್ಧೆಯಲ್ಲಿ ವಿಜೇತರಿಗೆ ಬಹುಮಾನಗಳನ್ನು ಮುಖ್ಯ ಅತಿಥಿಗಳು ವಿತರಿಸಿದರು.

ಸ್ಕೌಟರ್ ಎನ್. ಎಲ್. ಭಟ್ಟ ಕನಕ ಸ್ವಾಗತಿಸಿದರೆ, ಸ್ಕೌಟರ್ ಕೆ. ಕೆ. ಶೇಟ್ ಅವರು ಅತಿಥಿಗಳನ್ನು ಪರಿ ಚಯಿಸಿದರೆ, ಶ್ರೀ ವಿ. ಎಂ. ಭಟ್ಕಳ ಅವರ ವಂದ ನಾರ್ಪಣೆಯ ನಂತರ, ಮಕ್ಕಳಿಗೆ ಸಿಹಿ ವಿತರಣೆ ನಡೆಸ ಲಾಯಿತು.

## ಶಿರಾಲಿ

ಉತ್ತರ ಕನ್ನಡದ ಶಿರಾಲಿಯಲ್ಲಿ ಸ್ಥಳೀಯ ಸಂಸ್ಥೆಯ ವರು ಫೆ. ೨೨ ರಂದು ಸಂಸ್ಥೆಯ ಸಂಸ್ಥಾಪಕರ ದಿನಾಚರ ಣೆಯನ್ನು ಆಚರಿಸಿದರು. ಬೆಳಿಗ್ಗೆ ೯ ಗಂಟೆಗೆ ಪ್ರಾರ್ಥನೆ, ಧ್ವಜವಂದನೆ ಮುಗಿದ ನಂತರ ಸ್ಕೌಟನ ಗಂಟುಗಳು, ಪ್ರಥಮ ಚಿಕಿತ್ಸೆ, ಧ್ವಜ ಗೀತೆ, ಸ್ಕೌಟನ ೧೦ ನಿಯಮಗ ಳನ್ನೊಳಗೊಂಡಂತೆ ಲಿಖಿತ ಸ್ಪರ್ಧೆಗಳು ನಡೆದವು. ಮುಂದಾಳು ಶ್ರೀ ಕೆ. ಎನ್. ತಿಗಡಿಯವರಿಗೆ ಸರ್ವ ಶ್ರೀ ಆರ್. ಎನ್. ಪ್ರಭು, ಜಡ್. ಎ. ಅಸದಿ, ಆರ್. ವಿ. ಕುಮಟಾ, ಜೆ. ಜೆ. ನಾಯಕ್, ಎಸ್. ಜಿ. ಶಾಸ್ತ್ರಿ ಸಹಾಯಕರಾಗಿದ್ದರು. ಸರ್ವಶ್ರೀ ಗಾವಂಕರ್ ಮತ್ತು ಎಂ. ಆರ್. ಗೆದ್ದಪ್ಪ ಅವರು ನಿರ್ಣಾಯಕರಾಗಿದ್ದರು.

ಮಧ್ಯಾಹ್ನ ಎಲ್ಲ ಮಕ್ಕಳಿಗೆ ಊಟ ನೀಡಿದ ನಂತರ ಸಹಾಯಕ ಶಿಕ್ಷಣಾಧಿಕಾರಿ ಶ್ರೀ ಅಬ್ದುಲ್ ರಹಮಾನ್ ಅವರು ಲಾರ್ಡ್ ಮತ್ತು ಲೇಡಿ ಬೇಡನ್ ಪೋವೆಲ್ ಅವರ ಭಾವ ಚಿತ್ರಗಳನ್ನು ಅನಾವರಣಗೊಳಿಸಿದರು. ಭಟ್ಕಳದ ಪೋಲೀಸ್ ಸಬ್‌ಇನ್ಸ್‌ಪೆಕ್ಟರ್ ಶ್ರೀ ಪಿ. ಎಂ. ಪೆಮ್ಮಯ್ಯ ಉದ್ಘಾಟಿಸಿದ ಮೆರವಣಿಗೆಯಲ್ಲಿ ಸ್ಥಾಪಕರ ಭಾವಚಿತ್ರಗಳನ್ನು ಒಯ್ಯಲಾಯಿತು. ಸ್ಕೌಟರ್ ತಿಗಡಿ ಯವರು ಫಾದರ್ ವೇಷ ಕಬ್‌ಮಾಸ್ಟರ್ ಶಾಸ್ತ್ರಿಯವರು ಮುಲ್ಲಾನ ವೇಷ ಧರಿಸಿ ಸ್ಕೌಟ್ ಸಂಸ್ಥೆ ಸರ್ವ ಧರ್ಮ ಗಳ ಸಂಗಮವಾಗಿದೆ ಎಂಬುದನ್ನು ತೋರಿಸಿದರು.

ಊರಿನ ಹಿರಿಯ ಮುಂದಾಳುಗಳಾದ ಶ್ರೀ ಚಿಕ್ಕಪ್ಪ ಮಹಾಲೆಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸಿಂಡಿ ಕೇಟ್ ಬ್ಯಾಂಕಿನ ಮ್ಯಾನೇಜರ್ ಶ್ರೀ ಸುಧಾಕರ ಪೈ ಅವರು ಮುಖ್ಯ ಅತಿಥಿಗಳಾಗಿದ್ದರು. ಸಂಸ್ಥೆಯ ಪೋಷಕ ಶ್ರೀ ಕೆ. ಎನ್. ನಾಯಕ್, ಮಾದರಿ ಶಾಲೆಯ ಮುಖ್ಯೋಧ್ಯಾಪಕ ಶ್ರೀ ಜಿ. ಹೆಚ್. ನಾಯಕ್ ಅವರು ಸಮಯೋಚಿತ ಮಾತುಗಳನ್ನಾಡಿದರು. ಶ್ರೀ ಕೆ. ಎನ್. ತಿಗಡಿಯವರು ಸ್ವಾಗತಿಸಿದರೆ, ಪತ್ರಕರ್ತ ಶ್ರೀ ಪ್ರಕಾಶ ಶೇಟರು ಹಾರಗಳನ್ನರ್ಪಿಸಿದರೆ, ಶ್ರೀ ಆರ್. ಎನ್. ಪ್ರಭು ವಂದನೆ ಸಲ್ಲಿಸಿದರು.

ಸ್ಕೌಟರ್ ಜೆ. ಜೆ. ನಾಯಕ್ ಅವರು ಮನರಂಜನೆ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರೆ, ಉತ್ಸಾಹಿ ತರುಣ ರಾದ ಸರ್ವಶ್ರೀ ನಾಗೇಶ ಪಕ್ಕಿ ಮತ್ತು ಬಾಲಚಂದ್ರ ಡಿ. ಶುಕ್ಲ ಅವರು ತಲಾ ೨೨ ಮತ್ತು ೬ ಬಹುಮಾನಗಳನ್ನು ನೀಡಿದರು. ಶ್ರೀ ಪಕ್ಕಿಯವರು ಇಟ್ಟಿದ್ದ ಪಥ ಸಂಚಲನದ ವಿಶೇಷ ಪ್ರೋತ್ಸಾಹಕರ ಬಹುಮಾನವು ಭಟ್ಕಳದ ಆನಂದಾಶ್ರಮ ಕಾನ್ವೆಂಟ್ ಶಾಲೆಗೆ ಹೋಯಿತು. ರಾಷ್ಟ್ರ ಗೀತೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ರಾಮನಗರ

ಫೆ. ೨೫ರಂದು ರಾಮನಗರದ ಭಾರತೀಯ ಸಂಸ್ಕೃತಿ ವಿದ್ಯಾಪೀಠ ಬಾಲಿಕಾ ಪ್ರೌಢ ಶಾಲೆಯ ಗೈಡ್ ಘಟಕ ದವರು ಬೇಡನ್ ಪೊವೆಲ್ ಅವರ ಜನ್ಮ ದಿನೋತ್ಸವ ವನ್ನು ಗೈಡ್ ಕ್ಯಾಪ್ಟನ್ ಬಿ. ಡಿ. ಶಾಂತ ಅವರ ನೇತೃತ್ವ ದಲ್ಲಿ ನಡೆಸಿದರು. ತಾಲ್ಲೂಕು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಉಪಾಧ್ಯಕ್ಷ ಡಾ|| ಕೆ. ಪಿ. ಹೆಗ್ಡೆಯವರು ಅಂತರ ರಾಷ್ಟ್ರೀಯ ಶಾಂತಿ ಹಾಗೂ ಕೋಮು ಸೌಹಾರ್ದತೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮುಖ್ಯ ಪಾತ್ರ ವಹಿಸುತ್ತದೆಂದು ಹೇಳಿದರು. ಸಂಸ್ಥೆಯ ಅಧ್ಯಕ್ಷ ಡಾ|| ಎಸ್. ಎಲ್. ತಿಮ್ಮಯ್ಯನವರು ಮುಖ್ಯ ಅತಿಥಿ ಗಳಾಗಿದ್ದರು.

ವಿವಿಧ ಸ್ಪರ್ಧೆಗಳಲ್ಲಿ ವಿಜಯಗಳಿಸಿದವರಿಗೆ ಶ್ರೀಮತಿ ಸರಸ್ವತಿ ರಾಮಗೋಪಾಲ್ ಬಹುಮಾನ ವಿತರಣೆ ಮಾಡಿ ದರು. ಕು|| ಕೆ. ವಿ. ಅನಿತಾ ಸ್ವಾಗತಿಸಿದರು. ಕು|| ಎಸ್. ಮಂಜುಳಾ ವಂದನಾರ್ಪಣೆ ಮಾಡಿದರು. ಗೈಡ್ಸ್‌ಗಳಿಂದ ಮನೋರಂಜನೆ ಕಾರ್ಯಕ್ರಮ ನಡೆಯಿತು.

---

# ಮೈಸೂರು ನಗರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ರ್‍ಯಾಲಿ ಕಬ್ಸ್, ಬುಲ್‌ಬುಲ್ಸ್ ಉತ್ಸವ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮೈಸೂರು ನಗರ ಸಂಸ್ಥೆಯ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ಸ್ ಮತ್ತು ಗೈಡ್ಸ್ ಕೇಂದ್ರ ಕಛೇರಿಯಲ್ಲಿ ತಾರೀಖು 21-2-87 ರಂದು ಸ್ಕೌಟರ್ಸ್ ಮತ್ತು ಗೈಡರ್ಸ್ ಸಮ್ಮೇಳನವು ಮಧ್ಯಾಹ್ನ 3 ರಿಂದ ಸಂಜೆ 6 ರವರೆಗೆ ಜರುಗಿತು. ಈ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ನಗರ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಉಪಾಧ್ಯಕ್ಷರಾದ ಡಾ|| ಇಂದಿರಾ ಅಮ್ಲರವರು ಆಗಮಿಸಿದ್ದರು. ಅಧ್ಯಕ್ಷತೆಯನ್ನು ನಗರ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಬಿ. ಎಲ್. ರಾಮಸ್ವಾಮಿಯವಳು ನೆರವೇರಿಸಿ ಕೊಟ್ಟರು. ಈ ಸಮ್ಮೇಳನವು ವಿಜೃಂಭಣೆಯಿಂದ ನೆರವೇರಿತು.

22 - 2 - 87 ನೇ ಭಾನುವಾರದಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮೈಸೂರು ನಗರ ಸಂಸ್ಥೆಯ ಜಿಲ್ಲಾ ಮೇಳವು ಶ್ರೀ ಜಯಚಾಮರಾಜೇಂದ್ರ ಕೇಂದ್ರ ಕಛೇರಿಯಲ್ಲಿ ಜರುಗಿತು.

ಬೆಳಿಗ್ಗೆ 9 ಗಂಟೆಗೆ ನೋಂದಾವಣೆ ಆದನಂತರ ಶ್ರೀ ಮದ್ವಾರಾವ್‌ರವರು ಧ್ವಜವಂದನೆ ಮೂಲಕ ಉದ್ಘಾಟಿಸಿದರು.

ಈ ಮೇಳದ ಅಧ್ಯಕ್ಷತೆಯನ್ನು ನಗರ ಜಿಲ್ಲಾ ಸ್ಕೌಟ್ ಕಮೀಷನರ್ ಡಾ|| ಜೆ. ಎಸ್. ರಾಮನ್‌ರವರು ವಹಿ ಸಿದ್ದರು. ಶ್ರೀಮತಿ ಡಾ|| ಆರ್. ಲಲಿತ, ಜಿಲ್ಲಾ ಗೈಡ್ ಕಮೀಷನರ್ ಉಪಸ್ಥಿತರಿದ್ದರು. ಬೆಳಿಗ್ಗೆ 11-00 ರಿಂದ ಮಧ್ಯಾಹ್ನ 1 ಘಂಟೆಯವರೆವಿಗೆ ವಿವಿಧ ಸ್ಪರ್ಧೆಗಳನ್ನು ನಡೆಸಲಾಯಿತು. ಭೋಜನ ವಿರಾಮ ನಂತರ ಮತ್ತೆ ಕೆಲವು ಸ್ಪರ್ಧೆಗಳನ್ನು ನಡೆಸಲಾಯಿತು.

ಸಂಜೆ 4 ರಿಂದ 5 ಘಂಟೆಯವರೆವಿಗೆ ಸಂಸ್ಥೆಯ ಸಂಸ್ಥಾಪಕ ಲಾರ್ಡ್ ಬೇಡನ್ ಪೊವೆಲ್‌ರವರ ಜನ್ಮ ದಿನಾಚರಣೆ ಆಚರಿಸಿ, ಒಬ್ಬ ಸ್ಕೌಟ್ ಮತ್ತು ಗೈಡ್ ಅವರ ಬಗ್ಗೆ ಎರಡು ಮಾತನಾಡಿದರು.

ಸಂಜೆ 5 ಘಂಟೆಗೆ ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಅಧ್ಯಕ್ಷಣಿಯರಾದ ಶ್ರೀಮತಿ ಕಮಲಾ ರಾಮನ್‌ರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಶೀಲಾ ಇರಾನಿಯವರು ವಹಿ ಸಿದ್ದರು. ಬಹುಮಾನ ವಿತರಣೆ ಶ್ರೀ ಬಿ. ಎ. ಶ್ರೀನಿವಾಸ ಗುಪ್ತರವರು ಮಾಡಿದ್ದರು. ಮುಕ್ತಾಯ ಸಮಾರಂಭದ ವಂದನಾರ್ಪಣೆಯನ್ನು ಜಿಲ್ಲಾ ಕಾರ್ಯದರ್ಶಿಯವರಾದ ಡಾ|| ಕೆ. ಬಿ. ಗುರುಮೂರ್ತಿಯವರು ನೆರವೇರಿಸಿದರು.

# ರಾಬರ್ಟ್ ಬೇಡನ್ ಪೊವೆಲ್

ವಿ. ಎನ್. ರಾಜಾರಾವ್

ಯುದ್ಧ ಮಾಡುತ್ತಿರುವಾಗ ಒಮ್ಮೆ ಬೇಡನ್ ಪೊವೆಲ್ ಅವರೂ ಅವರ ಕಡೆಯವರೂ ಶತ್ರುಗಳಿಗೆ ಕಾಣದಂತೆ ಮರೆಯಾಗಿ ನಿಂತು, ಶತ್ರುಗಳು ಬಂದಾಗ ಅವರ ಮೇಲೆ ಬೀಳಲು ಕಾದು ಕೊಂಡಿದ್ದರು. ಸ್ವಲ್ಪವೂ ಶಬ್ದ ಮಾಡಕೂಡದೆಂದೂ, ಯಾರೂ ಹೊರಗೆ ಬಂದು ಕಾಣಿಸಿ ಕೊಳ್ಳಕೂಡದೆಂದೂ ನಿಕರವಾದ ಆಜ್ಞೆ ಯಾಗಿತ್ತು. ಆದರೆ ಇವರೊಳಗೆ ಒಬ್ಬನು ಇತರರಿಗಿಂತ ತಾನು ಹೆಚ್ಚು ಬುದ್ಧಿವಂತನೆಂಬ ಅಹಂಕಾರದಿಂದ ಹಗೆ ಗಳು ಬರುತ್ತಿದ್ದುದನ್ನು ನೋಡಬೇಕೆಂದು ಹೊರಟನು. ಶತ್ರುಗಳ ಕಡೆಯವನೊಬ್ಬನನ್ನು ನೋಡಿ, ಅವನ ಕಡೆಗೆ ಬಂದೂಕನ್ನು ಹಾರಿಸಿದನು. ಎದುರು ಕಡೆಯಿಂದಲೂ ಬಂದೂಕು ಹಿಂತಿರುಗಿ ಹಾರಿಸಲ್ಪಟ್ಟಿತು. ಕಡೆಗೆ ಇಬ್ಬರೂ ಮೃತರಾದರು. ಬಂದೂಕದ ಶಬ್ದವನ್ನು ಕೇಳಿ ಶತ್ರುಗಳು ಎಚ್ಚರಗೊಂಡು ಅಪಾಯದಿಂದ ಓಡಿ ಹೋದರು. ಒಬ್ಬನ ಅವಿಧೇಯತೆಯಿಂದ ಅವನ ಪ್ರಾಣ ಹೋದುದಲ್ಲದೆ, ಬೇಡನ್ ಪೊವೆಲ್ ಕಡೆಯ ವರು ಕೈಗೊಂಡಿದ್ದ ಕಾರ್ಯಕ್ಕೂ ವಿಘ್ನವುಂಟಾಯಿತು.

ಬೇಡನ್ ಪೊವೆಲ್ ಒಂದು ದಿನ ಹಗೆಗಳ ಪಾಳೆಯ ದೊಳಗೆ ೧೧ ಗಂಟೆಗಳ ಕಾಲ ಗಸ್ತು ತಿರುಗಾಡಿದರು. ಎಚ್ಚರವಾಗಿರಬೇಕೆಂಬ ಮನಸ್ಸಿನ ಬಿಗಿತದಿಂದ ಬೇಸರ ವಾಗದೆ, ಕಚೇರಿಯಲ್ಲಿ ಕುಳ್ಳಿರುವುದು ತಪ್ಪಿ ಅವರಿಗೆ ಹರ್ಷ. ರಾತ್ರಿಯ ಕಾಲದ ಸ್ಕೌಟ್ ಪ್ರಯಾಣಗಳಲ್ಲಿ ಬೇಡನ್ ಪೊವೆಲ್ ತಮ್ಮ ಕುದುರೆಯನ್ನು ಹಿಡಿದು ಕೊಳ್ಳಲು ನಂಬಿಕೆಯಾದ ದೇಶಿಯನೊಬ್ಬನೊಡನೆ ಹೋಗುತ್ತಿದ್ದರು. ಇದರಿಂದ ಅವರಿಗೆ, 'ಯಾವಾಗಲೂ ನಿದ್ರೆ ಮಾಡದ ತೋಳ (The walf that never sleeps)' ಎಂಬ ಹೆಸರು ಬಂತು. ಈ ಸಂದರ್ಭದಲ್ಲಿ ಸ್ಕೌಟಿಂಗ್‌ನ ಪ್ರಯೋಜನಗಳೆಷ್ಟೆಂದು ಬೇಡನ್ ಪೊವೆ ಲ್‌ರೇ ತಿಳಿಸಿರುವರು. ಅವಲೋಕನ ಶಕ್ತಿ (Observation), ಕಾರ್ಯ ಕಾರಣ ಸಮನ್ವಯ ಮಾಡುವ ಶಕ್ತಿ (Deduction), ಚುರುಕಾದ ದೃಷ್ಟಿ (Keen eye sight), ಘ್ರಾಣಶಕ್ತಿ (Sense of smell) ಮತ್ತು ವಿಷಯಗಳನ್ನು ಒಂದರೊಡನೊಂದನ್ನು ಸರಿ ಯಾಗಿ ಹೊಂದಿಸಿ ನಿರ್ಣಯ ಮಾಡುವುದು ಇವು ಸ್ಕೌಟ್‌ಗಳಿಗೆ ಅಗತ್ಯವಾಗಿರಬೇಕು.

ಅವರು ಕಲಿತಿದ್ದ ನರ್ತನವು ಈ ಕಾಲದಲ್ಲಿ ಸಹಾಯ ವಾಯಿತು. ಇಲ್ಲದಿದ್ದರೆ ಹಗೆಗಳನ್ನು ಮೋಸಗೊಳಿಸು ವುದಕ್ಕೆ ಸಾಧ್ಯವಿಲ್ಲದೆ, ಅವರಿಗೆ ಬಂದಿಯಾಗಿ ಸಿಕ್ಕಿ ಕೊಲೆ ಯಾಗುತ್ತಿದ್ದರು. ಆಗ ಇನ್ನೂ ಕೆಲವು ಸಾಹಸ ಕಾರ್ಯಗಳನ್ನು ಮಾಡಿದರು. 'ಉವಿನಿ (Uvini)' ಎಂಬ ನಾಯಕನ ಕೋಟೆಗೆ ಇವರ ದಂಡು ಮುತ್ತಿಗೆ ಹಾಕಿತು. ಗುಹೆಗಳಲ್ಲೆಲ್ಲಾ ಇಬ್ಬರು ಧೈರ್ಯವಾಗಿ ಈ ನಾಯಕನನ್ನು ಅಟ್ಟಿಸಿಕೊಂಡು ಹೋದರು. ಕಡೆಗೆ ಅವನಿಗೆ ಗಾಯವಾಗಿ ಬಂದಿಯಾಗಿ ಸಿಕ್ಕನು. ಆತನ ಜನರಿಗೆ ಶರಣಾಗತರಾಗುವಂತೆ ಅಪ್ಪಣೆ ಮಾಡಲು ಬೇಡನ್ ಪೊವೆಲ್ ಹೇಳಿದರು. ಅವನು ಒಪ್ಪಲಿಲ್ಲ. ಅವನ ಜನರೆಲ್ಲರೂ ನೋಡುವಂತೆ ಅವನನ್ನು ಗುಂಡಿನ ಬಾಯಿಗೆ ತುತ್ತುಮಾಡಿದರು. ನಂತರ ಉವಿನಿಯ ಜನರು ಶರಣಾಗತರಾದರು.

ಈ ಕಾರ್ಯವನ್ನು ಮಾಡಿದುದಕ್ಕಾಗಿ ಬೇಡನ್ ಪೊವೆಲ್‌ರ ವಿಚಾರಣೆ ನಡೆಯಿತು. ಸೈನ್ಯದ ಮುಖ್ಯಾಧಿ ಕಾರಿ ಕ್ಯಾರಿಂಗ್‌ಟನ್ (Carrington) ವಿಚಾರಣೆ ನಡೆಸಿ, ಬೇಡನ್ ಪೊವೆಲ್ ಮಾಡಿದ ಕೆಲಸ ನ್ಯಾಯ ವಾಗಿತ್ತೆಂದು ತೀರ್ಮಾನವಾಯಿತು.

ಕಷ್ಟ ನಷ್ಟಗಳಿಗಂಜದೆ ತನ್ನ ಕರ್ತವ್ಯವನ್ನು ತಾನು ಸರಿಯಾಗಿ ಮಾಡಿದುದಕ್ಕಾಗಿ ಮೆಚ್ಚಿಗೆಯ ಪತ್ರಗಳು ಬೇಡನ್ ಪೊವೆಲ್‌ರಿಗೆ ಗುಟ್ಟಾಗಿ ದೊಡ್ಡದೊಡ್ಡವರಿಂದ ಬಂದವು.

## ಮ್ಯಾಟಬಲ್ ದಂಡಯಾತ್ರೆ

ಮ್ಯಾಟಬಲ್ ಮೇಲೆ ನಡೆಸಿದ ಈ ದಂಡಯಾತ್ರೆಯಲ್ಲಿ ಬೇಡನ್ ಪೊವೆಲ್‌ರ ಕಡೆಯ ಸಾಹಸವೆಂದರೆ ವೆಡ್ಸ್‌ನ (Wedz) ಕೋಟೆಗೆ ಮುತ್ತಿಗೆ ಹಾಕಿ ಹಿಡಿದುದು. ಈ ಕೋಟೆಯು ಆರು ಎತ್ತರವಾದ ಶಿಖರಗಳುಳ್ಳ ಒಂದು ದೊಡ್ಡ ಬೆಟ್ಟ. ಇದನ್ನು ಮುತ್ತಿಗೆ ಹಾಕುವಷ್ಟು ಶಕ್ತಿಯು ತನಗಿಲ್ಲವೆಂದು ಬೇಡನ್ ಪೊವೆಲ್‌ರಿಗೆ ಗೊತ್ತು. ಶಕ್ತಿಯಿಂದಾಗದಿರುವುದು ಯುಕ್ತಿಯಿಂದಾಗುವುದಲ್ಲವೆ? ಇದಕ್ಕಾಗಿ ಅವರು ಒಂದು ಉಪಾಯವನ್ನು ಮಾಡಿದರು. ಎರಡು ದಿನಗಳು ಮತ್ತು ಒಂದು ರಾತ್ರಿ ಸುತ್ತಲೂ ಅಲ್ಲಲ್ಲಿ ಸಣ್ಣ ಠಾಣ್ಯಗಳನ್ನು ನಿಲ್ಲಿಸಿದರು. ಆಮೇಲೆ ಒಂದು ಸಮಯದಲ್ಲಿ ಎಲ್ಲಾ ಕಡೆಗಳಿಂದಲೂ, ಎಡೆ ಬಿಡದಂತೆ ಬೆಂಕಿಯನ್ನು ಹಾಕಿ ರಾತ್ರಿಯೆಲ್ಲ ಉರಿಯು ಕಾಣುವಂತೆ ಏರ್ಪಾಟು ಮಾಡಿದರು. ಇದನ್ನು ನೋಡಿ ಇವರ ಬಳಿಯಲ್ಲಿ ಬಹಳ ದೊಡ್ಡ ದಂಡಿರಬಹುದೆಂದು ತಿಳಿದು ಶತ್ರುಗಳು ಎರಡು ದಿನಗಳಾದ ಮೇಲೆ ತಮ್ಮ ಕೋಟೆಯನ್ನು ಬಿಟ್ಟು ಹೋದರು. ಬೇಡನ್ ಪೊವೆಲ್‌ರ ಕಡೆಯವರು ೬೦ ಮೈಲಿಗಳವರೆಗೂ ಅವರನ್ನು ಹಿಂಬಾಲಿಸಿದರು. ನಂತರ ವೆಡ್ಸ್‌ನೂ ಅವನ ಕಡೆಯವರೂ ಶರಣಾಗತರಾದರು.

ಮ್ಯಾಟಬಲ್ ದಂಡಯಾತ್ರೆಯಲ್ಲಿ ಮಾಡಿ ಒಳ್ಳೆಯ ಕೆಲಸಕ್ಕಾಗಿ ಬೇಡನ್ ಪೊವೆಲ್‌ರಿಗೆ "ಕರ್ನಲ್ (Colonel)" ಎಂಬ ದೊಡ್ಡ ಪದವಿ ಸಿಕ್ಕಿತು.

ಈ ದಂಡಯಾತ್ರೆಯ ವಿಷಯದಲ್ಲಿ ಬೇಡನ್ ಪೊವೆಲ್‌ರೇ ಬರೆದಿರುವ ಪುಸ್ತಕದಲ್ಲಿ ಮ್ಯಾಟಬಲ್ ಯೋಧನ ವರ್ಣನೆಯು ಚಿತ್ರವನ್ನು ಕಣ್ಣೆದುರಿಗೆ ತಂದು ನಿಲ್ಲಿಸುವುದು— "ಸ್ಕೌಟ್ ಕೆಲಸವನ್ನು ಮಾಡುತ್ತ ಕುದುರೆಯನ್ನೊಂದೆಡೆ ಬಿಟ್ಟು ನಾನೊಬ್ಬನೇ ಹೊರಗೆ ಬಂದು ಹೊಳೆಯ ಬಳಿ ಸ್ವಲ್ಪ ವಿಶ್ರಮಿಸಿಕೊಳ್ಳುತ್ತಾ ಬಂಡೆಗಳ ಕಡೆ ನೋಡುತ್ತಿದ್ದೆನು. ಆಗ ಒಡವೆಗಳ ಶಬ್ದವು ಕೇಳಿಸಿತು. ನನಗೆ ೨೦ ಗಜ ದೂರದಲ್ಲಿ ಮ್ಯಾಟಬಲ್ ಯೋಧನೊಬ್ಬನು ಹೊಳೆಯ ಬಂಡೆಗಳ ಮಧ್ಯೆ ನಿಂತಿದ್ದುದನ್ನು ನೋಡಿದೆನು. ಬಿಳಿದಾದ ಯುದ್ಧದ ಆಭರಣಗಳು, ಕಂದು ಬಣ್ಣದ ಚರ್ಮ, ವಿಚಿತ್ರವಾದ ಉಡುಪು, ಎಡಗೈಯಲ್ಲಿ ಎತ್ತಿನ ಚರ್ಮದ ಗುರಾಣಿ, ಬಲಗೈಯಲ್ಲಿ ಹಳದಿಯ ದೊಣ್ಣೆ—ಒಂದು ಕ್ಷಣ ಅವನು ನಿಶ್ಚಲನಾಗಿದ್ದನು. ಆಮೇಲೆ ಬಹು ಚಾಲಕ್ಕಾಗಿ ಆಯುಧಗಳನ್ನೂ, ಗುರಾಣಿಯನ್ನೂ ಬಂಡೆಗಳ ಮೇಲಿಟ್ಟು ನಾಲ್ಗಾಲು ಮಾಡಿಕೊಂಡು ಪ್ರಾಣಿಗಳಂತೆ ಬಗ್ಗಿ ನೀರು ಕುಡಿದನು. ಬಹಳ ಬಾಯಾರಿಕೆಯಿಂದ ಅವನು ನೀರನ್ನು ಹೀರಿಸುತ್ತಿದ್ದ ಶಬ್ದವು ನನಗೆ ಕೇಳಿಸಿತು. ಬಹಳವಾಗಿ ಕುಡಿದ ಮೇಲೆ ಎದ್ದು ತಾನು ಆಯುಧಗಳನ್ನು ತೆಗೆದುಕೊಂಡು ಕಿವಿಗೊಟ್ಟು ಏನನ್ನೋ ಆಲಿಸಿದನು. ಅವನಿಗೆ ಏನೂ ಕೇಳಿಸಲಿಲ್ಲ—ಆದುದರಿಂದ ಮೂರೇ ಹೆಜ್ಜೆಗಳನ್ನಿಟ್ಟು ಹುಲ್ಲಿನ ಮಧ್ಯದಲ್ಲಿ ಅವನು ಅದೃಶ್ಯನಾದನು."

ಇದೇ ದೇಶದಲ್ಲಿ ಒಮ್ಮೆ ಬೇಡನ್ ಪೊವೆಲ್ ಇನ್ನೊಬ್ಬನೊಡನೆ ಗಸ್ತು ತಿರುಗುತ್ತಿದ್ದರು. ಎದುರಿಗೆ ಒಂದು ದೊಡ್ಡ ಸಿಂಹವು ಕಾಣಿಸಿತು. ಇಬ್ಬರೂ ಕುದುರೆಗಳಿಂದಿಳಿದು ಸಿಂಹವನ್ನು ಬಂದೂಕಿನಿಂದ ಹೊಡೆದರು. ಅದು ಕೆಳಗೆಬಿತ್ತು. ಆದರೆ ಪ್ರತಿಕ್ಷಣದಲ್ಲಿಯೇಎದ್ದು ಓಡುವುದಕ್ಕೆ ಕೈಯಲ್ಲಾಗದೆ ಅದು ಸುತ್ತಲೂ ಸುತ್ತಾಡಿತು. ಹಗೆಗಳು ತಮ್ಮನ್ನು ಕಂಡುಹಿಡಿದಾರೆಂದು ಇವರು ಹೆಚ್ಚು ತುಪಾಕಿಗಳನ್ನು ಹಾರಿಸಲಿಲ್ಲ. ಬೇಡನ್ ಪೊವೆಲ್ ಸಿಂಹದ ಬಳಿಗೆ ಹೊರಟರು. ಅವರ ಸ್ನೇಹಿತ ಬಂದೂಕನ್ನಿಟ್ಟುಕೊಂಡು ಎಚ್ಚರಿಕೆಯಿಂದ ಕಾದಿದ್ದರು. ಸಿಂಹವು ಇವರನ್ನು ನೋಡಿ ತನ್ನ ಬಾಯನ್ನು ತೆರೆದುಕೊಂಡು ಮೇಲೆ ಬಿತ್ತು. ಬೇಡನ್ ಪೊವೆಲ್ ತುಪಾಕಿಯನ್ನು ಹೊಡೆದು ಅದನ್ನು ಕೊಂದರು. ನಂತರ ಅದರ ಚರ್ಮವನ್ನು ಸುಲಿಯಲಾರಂಭಿಸಿದರು. ಒಬ್ಬರು ಸುಲಿಯುತ್ತಿರುವಾಗ ಮತ್ತೊಬ್ಬರು ಹಗೆಗಳ ಸುಳಿವನ್ನೇ ನೋಡುತ್ತಿದ್ದರು. ಶತ್ರುಗಳು ಬರುವುದಕ್ಕೆ ಮುಂಚೆಯೇ ಚರ್ಮವನ್ನು ಮೂಟೆಕಟ್ಟಿಕೊಂಡು ಕುದುರೆಗಳನ್ನೇರಿ ಹೊರಟು ಹೋಗಿದ್ದರು.

## ಸ್ಕೌಟಿಂಗ್ ವಿಷಯ

ಈ ದಂಡಯಾತ್ರೆಯ ವಿಚಾರವಾಗಿ ಬೇಡನ್ ಪೊವೆಲ್ ಒಂದು ಪುಸ್ತಕವನ್ನು — Matabele Campaign — ಬರೆದಿದ್ದಾರೆ. ಅದರಲ್ಲಿ ಸ್ಕೌಟಿಂಗಿಗೆ ಸಂಬಂಧಪಟ್ಟ ಕೆಲವು ವಿಷಯಗಳಿವೆ :—ನಾವು ಹೊರಗಡೆ ಸಂಚಾರ ಮಾಡುವಾಗ ಸಣ್ಣ ಪುಟ್ಟ ಗುರ್ತುಗಳನ್ನು

ಅಲಕ್ಷ್ಯ ಮಾಡಬಾರದು. ಕೆದರಿರುವ ಮರಳು, ಮುದಿರಿರುವ ಹುಲ್ಲುಗರಿಕೆಗಳು, ಪೊದರಿನಿಂದ ತಟಕ್ಕನೆ ಬೆದರಿ ಓಡಿಬರುವ ಮೊಲ, ಗುಡ್ಡದ ಮೇಲೆ ಅಕಸ್ಮಾತ್ತಾಗಿ ಹೊಳೆಯುವ ಬೆಳಕು, ದೂರದಲ್ಲಿ ನಾಯಿ ಬೊಗಳುವುದು—ಇವುಗಳನ್ನೆಲ್ಲ ಪುಸ್ತಕದ ಪುಟದಲ್ಲಿನ ಅಕ್ಷರಗಳನ್ನು ಒಟ್ಟುಗೂಡಿಸಿ ಓದಿದರೆ ಹೇಗೆ ಅರ್ಥವಾಗುವುದೋ ಹಾಗೆ ಒಟ್ಟುಗೂಡಿಸಿ ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿದರೆ ಉಪಯುಕ್ತವಾದ ಬಹು ಸಂಗತಿಗಳನ್ನು ಸಂಗ್ರಹಿಸಬಹುದು. ಇದು ಸ್ಕೌಟ್‌ಗೆ ಅವಶ್ಯಕ. ಸರಿಯಾದ ಶಿಕ್ಷಣವಿಲ್ಲದೆ ತನ್ನ ಸಾಮರ್ಥ್ಯದಲ್ಲಿ ತನಗೆ ನಂಬಿಕೆ ಬರಲಾರದು. ಇಂತಹ ನಂಬಿಕೆಯಿಲ್ಲದೆ ಸ್ಕೌಟ್ ಕಾರ್ಯದಲ್ಲಿ ತೊಡಗಿದರೇನೂ ಪ್ರಯೋಜನವಿಲ್ಲ. ವಿವರಗಳನ್ನು ಗುರುತು ಮಾಡಿಕೊಂಡು ವಿಚಾರ ಮಾಡುವ ಅಭ್ಯಾಸವನ್ನು ಅಭಿವೃದ್ಧಿ ಮಾಡುವುದೇ ಈ ಶಿಕ್ಷಣದ ರೀತಿ. ಜೀವನಕ್ಕೆ ಸಂಬಂಧಪಟ್ಟ ಸಾಮಗ್ರಿಗಳೇ ನನ್ನ ಆಟದ ಸಾಮಾನುಗಳು. ತಮ್ಮ ತಮ್ಮ ಸ್ವಭಾವಕ್ಕನುಗುಣವಾದ ಸಾಮಾನುಗಳೇ ಪ್ರತಿಯೊಬ್ಬರೂ ದೇವರನ್ನು ತಿಳಿಯಲು ಸಹಕಾರಿಯಾದ ಸಾಮಗ್ರಿಗಳಲ್ಲವೇ ? ರಾಮಕೃಷ್ಣ ಪರಮಹಂಸರು ಹೇಳಿರುವಂತೆ ದೇವರಿಗೆ ಅನಂತನಾಮಗಳು ಅನಂತ ರೂಪಗಳು. ನಾವು ಯಾವ ನಾಮದಿಂದ ಯಾವ ರೂಪಿನಲ್ಲಿ ಆತನನ್ನು ತಿಳಿಯಲಪೇಕ್ಷಿಸುವೆವೋ ಹಾಗೆಯೇ ದೇವರು ಗೋಚರನಾಗುವನು.

ಸ್ವಲ್ಪ ಕಾಲದಲ್ಲಿಯೇ ಅವರು ಮರಳಿ ಭಾರತ ದೇಶಕ್ಕೆ ಹೊರಡಬೇಕಾಗಿ ಬಂತು. ಅವರಿಗೆ ದೊಡ್ಡ ಹುದ್ದೆಯು ಸಿಕ್ಕಿತು. ಮೀರತ್‌ಗೆ (Meerut) ಬಂದು ಸೇರಿದರು. ಯಾವ ಕಾಯಿಲೆಯೂ ಬಾರದಂತೆ ಬೇಕಾದಷ್ಟು ಚಟುವಟಿಕೆಯಿಂದ ಕೆಲಸದಲ್ಲಿಯೇ ನಿರತರಾಗಿದ್ದರು. ಸೈನಿಕರಿಗೂ, ಸೈನ್ಯಾಧಿಕಾರಿಗಳಿಗೂ ಹಾಲು ಮತ್ತು ರೊಟ್ಟಿ ಇವುಗಳನ್ನು ಒದಗಿಸಲು ಕಟ್ಟಡಗಳನ್ನು ಕಟ್ಟಿಸಿದರು. ನಾಟಕಗಳನ್ನು ಏರ್ಪಡಿಸಿ ತಾವು ಪ್ರಧಾನ ಪಾತ್ರಗಳನ್ನು ವಹಿಸಿದರು. ಇಷ್ಟು ಕಷ್ಟಪಟ್ಟು ಕೆಲಸ ಮಾಡುತ್ತ ಹೆಚ್ಚಾಗಿ ಜವಾಬ್ದಾರಿಯ ಹೊರೆಯನ್ನು ಹೊರುತ್ತಿದ್ದರೂ ಹಂದಿಯ ಬೇಟೆಯನ್ನು (Pig Sticking) ಮಾತ್ರ ಬಿಡುತ್ತಿರಲಿಲ್ಲ.

ಮೀರತ್‌ನ ನಾಟಕ ಸಂಘಕ್ಕೆ ಇವರು ಅಧ್ಯಕ್ಷರಾದರು : ಹಂದಿಯ ಬೇಟೆಯ ಸಂಘಕ್ಕೆ ಕಾರ್ಯದರ್ಶಿಯಾದರು. ಪ್ರತಿವರ್ಷ ನಡೆಯುವ ಸೈನಿಕರ ಸವಾರ ಯುದ್ಧ ಸಾಧಕ ಕಾರ್ಯಕಲಾಪಗಳಿಗೆ ಅಧ್ಯಕ್ಷತೆ. ಇಷ್ಟು ಕೆಲಸಗಳ ಜೊತೆಗೆ ನಾಲ್ಕು ದಿನಗಳು ಸವಾರರ ಸೈನ್ಯದ ಇನ್ಸ್‌ಪೆಕ್ಟರ್ ಜನರಲ್‌ರ (Inspector General of Cavalry Forces) ವಾರ್ಷಿಕ ಮೇಲ್ವಿಚಾರಣೆಗೆ ಒಳಗಾದುದು ಬೇರೆ. ಇಲ್ಲಿನ ಕೆಲಸವು ಮುಗಿದ ಮೇಲೆ ಇಂಗ್ಲೆಂಡಿಗೆ ಹಿಂತಿರುಗಿದರು.

## ಭಾರತದ ಅನುಭವ

ಭಾರತದಲ್ಲಿನ ತಮ್ಮ ಅನುಭವಗಳನ್ನೂ, ವಿಚಿತ್ರವಾದ ಸಾಹಸ ಕಾರ್ಯಗಳನ್ನು ಕುರಿತು "ಇಂಡಿಯನ್ ಮೆಮೊರೀಸ್ (Indian Memories)" ಎಂಬ ಗ್ರಂಥವನ್ನು ಬರೆದು ಈ ರೀತಿ ಹೇಳಿದ್ದಾರೆ— "ನಾನು ಸಣ್ಣ ಅಧಿಕಾರಿಯಾಗಿದ್ದಂದಿನಿಂದ ಸ್ಕೌಟಿಂಗ್‌ನಲ್ಲಿರುವ ರೂಢಿ ಭಾಗದ ಶಿಕ್ಷಣದ ಅವಶ್ಯಕತೆಯು ನನ್ನ ಆಲೋಚನೆಯಲ್ಲಿ ತುಂಬಿತ್ತು. ಹಿಂದೂ ದೇಶದಲ್ಲಿ ಇದನ್ನು ನಾನು ಬಹುಮಟ್ಟಿಗೆ ಕಾರ್ಯರೂಪಕ್ಕೆ ತಂದೆನು. ಮ್ಯಾಟಬಲ್ ದಂಡಯಾತ್ರೆಯಲ್ಲಿ ಶತ್ರುಗಳ ಮೇಲೆ ನುಗ್ಗುವರನೇಕರಿದ್ದರೂ ನಮಗೆ ಬೇಕಾದ ವರ್ತಮಾನವನ್ನು ಹೇಗೆ ತರಬೇಕೆಂಬುದು ಅವರಿಗೆ ತಿಳಿಯದು. ನಾನು ಹಿಂದೂ ದೇಶಕ್ಕೆ ಬಂದ ಮೇಲೆ ಸೈನಿಕರಿಗೆ ಅವರ ಕಾರ್ಯದಲ್ಲಿರುವ ಲೋಪಗಳನ್ನು ಸರಿಪಡಿಸುವ ಶಿಕ್ಷಣವನ್ನು ಕೊಡಲು ಉಪಕ್ರಮಿಸಿದೆನು. ಕವಾತು ಮೊದಲಾದುದರಲ್ಲಿ ಅಂದವಾಗಿ ಕಂಡಮಟ್ಟಿಗೆ ಸರಿಯಾದ ಸೈನಿಕನಾಗುವುದಿಲ್ಲ. ಇದರಿಂದ ಬಾಹ್ಯ ಪ್ರದರ್ಶನಕ್ಕೆ ಪ್ರಯೋಜನವಲ್ಲದೆ ನಿಜವಾಗಿಯೂ ಶತ್ರುವನ್ನು ಎದುರಿಸಲು ಅನುಕೂಲವಾಗುವುದಿಲ್ಲ. ಪಾಠಶಾಲೆಗಳಲ್ಲಿ ಶಿಕ್ಷಣ ಪಡೆದ ಬಾಲಕರಿಗೆ ಧೈರ್ಯ, ಸ್ವಾವಲಂಬನ, ಸಮಯೋಚಿತ ಬುದ್ಧಿ— ಇವುಗಳು ಕಂಡುಬರುವುದಿಲ್ಲ. ಸ್ಕೌಟ್ ಕರ್ತವ್ಯಗಳ ಮೂಲಕ ನಾನು ಇದನ್ನು ಅವರಿಗೆ ಅನುಭವಕ್ಕೆ ಬರುವಂತೆ ಮಾಡಿದೆನು."

ಬೇಡನ್ ಪೊವೆಲ್ ಹೆಸರುವಾಸಿಯಾದ ಸವಾರರ ಸೈನ್ಯದ ಮುಖ್ಯಾಧಿಕಾರಿಯಾಗಿ ಭಾರತಕ್ಕೆ ಬಂದರು.

ದೊಡ್ಡ ದೊಡ್ಡ ಅಧಿಕಾರಿಗಳೊಡನೆ ಕೊಠಡಿಯಲ್ಲಿ ತಾವು ತನಿಖೆ ಮಾಡುತ್ತ ಕುಳಿತಿರುವಾಗ ಯಾರೋ ಒಬ್ಬ ಆಕಸ್ಮಾತ್ತಾಗಿ ಒಳಗೆ ನುಗ್ಗಿ ಎರಡು ಕೈಗಳಿಂದಲೂ ಇವರ ಕಡೆಗೆ ಬಹಳ ಸದರದಿಂದ ಬಂದು "ಹೇಗಿರುವೆ, ವಿಲ್ಲಿಸ್‌ನೇ ?" ಎಂದು ಒರಟಾಗಿ ಕೇಳಿದನು. ಇದನ್ನು ಕೇಳಿ ಬೇಡನ್ ಪೊವೆಲ್‌ರ ಕೈಕೆಳಗಿದ್ದ ನೌಕರರು ವಿಸ್ಮಿತರಾದರು. ಆ ಹೊಸಬ ಹೊರಟು ಹೋದ ಮೇಲೆ ಬೇಡನ್ ಪೊವೆಲ್‌ರು ಹಿಂದೆ ನಡೆದಿದ್ದ ವಿಷಯವನ್ನು ವಿಸ್ತರಿಸಿದರು.

"ಹೋದಸಲ ನಾನು ಇಂಡಿಯಾ ದೇಶಕ್ಕೆ ಬಂದಿದ್ದಾಗ ಮೀರತ್‌ನಲ್ಲಿ ಒಂದು ನಾಟಕ ಸಂಘ ಬಂದಿತ್ತು. ಅವರು ನಾಟಕವನ್ನಾಡುವ ದಿನ ಅಭಿನಯಕಾರರಲ್ಲೊಬ್ಬನು ಕಾಹಿಲೆ ಬಿದ್ದನು. "ಪಾರ್ಲಿಮೆಂಟ್‌ನ (Parliament) ಮನೆಯ ಹೊರಗಿರುವ ಕಾವಲುಗಾರನಾದ ವಿಲ್ಲಿಸ್ ಎಂಬ ಪಾತ್ರವನ್ನು ಹಾಕುವೆಯಾ ?" ಎಂದು ನನ್ನನ್ನು ಅವರು ಕೇಳಿದರು. ಒಂದು ಮಧ್ಯಾಹ್ನದೊಳಗಾಗಿ ಅದನ್ನು ಕಲಿತುಕೊಂಡು ನಾನು ಧೈರ್ಯವಾಗಿಯೂ, ಸರಿಯಾಗಿಯೂ ರಂಗಸ್ಥಳದಲ್ಲಿ ಅಭಿನಯಿಸಿದೆನು. ಒಂದು ಸ್ತ್ರೀ ಪಾತ್ರವನ್ನು ಕರೆಯುವ ಮಾತನ್ನು ನಾನು ಆ ಸಂದರ್ಭದಲ್ಲಿ ಹೇಳಬೇಕಾಯಿತು. ಸ್ತ್ರೀ ಪಾತ್ರವು ಇನ್ನೂ ಸಿದ್ಧಪಡಿಸಿಕೊಂಡಿರಲಿಲ್ಲ, ರಂಗಸ್ಥಳದ ಸೂತ್ರಧಾರನು (Stage Manager) ನನ್ನೊಡನೆ ಪಿಸುಮಾತಿನಲ್ಲಿ 'ಆ ಪಾತ್ರವು ಸಿದ್ಧಪಡಿಸಿಕೊಂಡುದು ಇನ್ನೂ ಮುಗಿದಿಲ್ಲ' ಎಂದನು. ಸಮಯೋಚಿತವಾದ ಹಾಸ್ಯದ ನುಡಿಗಳಿಂದ ಅಲ್ಲಿ ನೆರೆದಿದ್ದ ಪ್ರೇಕ್ಷಕರಿಗೆ ಸಂತೋಷಪಡಿಸುವುದರಲ್ಲಿ ನಾನು ಆ ಕಾಲವನ್ನು ಕಳೆದೆನು. ಅಂತೂ ಆ ಸಮಯದಲ್ಲಿ ಸಹಾಯಮಾಡಿದುದಕ್ಕಾಗಿ ನಾಟಕದ ಪಾರುಪತ್ಯಗಾರನು ನಾನು ಬಂದಿರುವೆನೆಂದು ತಿಳಿದು ನನ್ನನ್ನು ಮಾತನಾಡಿಸಲು ಬಂದಿದ್ದನು" ಎಂದು ಹೇಳಿದನು.

## ಸ್ಕೌಟ್ ಗುಣಗಳು

ಕ್ವೆಟ್ಟಾದಲ್ಲಿದ್ದಾಗ (Quetta) ತನ್ನ ಸ್ಕೌಟ್ ಗುಣಗಳನ್ನು ಒರೆಹಚ್ಚುವ ಸಮಯವು ಬಂತು. ತಮ್ಮ ಸೈನ್ಯದಲ್ಲಿ ಕೆಲವರು ದಂಡು ಇಳಿದಿದ್ದ ಠಾಣ್ಯದ ರಕ್ಷಣೆಗೋಸ್ಕರ ರಾತ್ರಿ ಶತ್ರುಗಳಂತೆ ವರ್ತಿಸುವಂತೆ ಏರ್ಪಾಡಾಯಿತು. ಕಾವಲುಗಾರರೇ ಮೊದಲಾದವರು ಸರಿಯಾಗಿ ನಿಂತಿರುವರೇ ಎಂದು ಅಂಬೆಗಾಲಿಟ್ಟುಕೊಂಡು ಬೇಡನ್ ಪೊವೆಲ್‌ರೂ, ಇನ್ನೂ ಕೆಲವರು ಪರೀಕ್ಷಿಸಲು ನಿಂತರು. ಈ ರೀತಿ ಕೆಲಸವನ್ನು ನೇಮಿಸಿದೊಡನೆಯೇ ತ್ವರೆಯಿಂದ ತಮ್ಮ ಕರ್ತವ್ಯವನ್ನು ನಡೆಸಲು ಹೊರಟರು. ಸ್ಕೌಟ್‌ಗಳಲ್ಲಿ ಕೆಲವರು ಕಾವಲುಗಾರರಿಂದ ಹಿಡಿಯಲ್ಪಟ್ಟರು, ಮತ್ತೆ ಕೆಲವರು ಹಿಂದಕ್ಕೆ ಓಡಿಸಲ್ಪಟ್ಟರು. ಬೇಡನ್ ಪೊವೆಲ್‌ರ ಕಡೆಯವರಲ್ಲಿ ಕೆಲವರು ಶತ್ರುಗಳಿಳಿದುಕೊಂಡಿದ್ದ ಸ್ಥಳಗಳನ್ನು ಕಂಡುಹಿಡಿದು ಸ್ವಲ್ಪಹೊತ್ತು ಹುಲ್ಲಿನ ಮೇಲೆ ಮಲಗಿಕೊಂಡರು. ಸ್ವಲ್ಪ ಹೊತ್ತಿನ ಮೇಲೆ ಎಚ್ಚರವಾಯಿತು. ಚಳಿಯಾಗುತ್ತಿತ್ತು. ಕೆಲವು ಸಮಾಚಾರಗಳನ್ನು ಗೂಢವಾಗಿ ಕಂಡುಹಿಡಿದುಕೊಂಡು ಬರಲು ಹೊರಹೊರಟರೆ ಬಿಸಿ ಹುಟ್ಟಬಹುದೆಂದು ಬೇಡನ್ ಪೊವೆಲ್‌ರಿಗೆ ತೋರಿತು. ಕಾವಲುಗಾರರಿದ್ದ ಸ್ಥಳವು ಚೆನ್ನಾಗಿ ಗೊತ್ತಿದ್ದುದರಿಂದ ಅವರನ್ನು ತಪ್ಪಿಸಿಕೊಂಡು ಬೇರೆ ಕಡೆಗೆ ಅವನು ಅಂಬೆಗಾಲಿಟ್ಟುಕೊಂಡು ಹೋದನು.

ಸಂಜೆಯಲ್ಲಿಯೇ ಇವರನ್ನು ಓಡಿಸಿದ್ದುದರಿಂದ ಇವರೆಲ್ಲರೂ ಇನ್ನು ಮುಂದುವರಿಯದಂತೆ ಹಿಂದಕ್ಕೇ ಓಡಿಹೋಗಿ ಬಿಟ್ಟಿದ್ದರೆಂದು ಅವರ ಶತ್ರುಪಕ್ಷದವರು ಅಜಾಗರೂಕರಾಗಿದ್ದರು. ಆದ ಕಾರಣ ಬೇಡನ್ ಪೊವೆಲ್ ಮೆಲ್ಲಗೆ ಉಪಾಯವಾಗಿ ಮುಂದು ಮುಂದಕ್ಕೆ ಸರಿದುಕೊಂಡು ಹೋದರು. ಹೋಗುವಷ್ಟೂ ಹೋಗಿ ತನ್ನ ಕೈಚೀಲವನ್ನು ಒಂದು ಪೊದರಿನಲ್ಲಿ ಬಿಟ್ಟು ಅರುಣೋದಯವಾಗುತ್ತಿರುವಾಗ ತಮ್ಮವರಿದ್ದೆಡೆಗೆ ಹೊರಟರು. ಆ ಮೇಲೆ ಸೈನ್ಯದ ಜನರಲ್ (General) ಎರಡು ಪಕ್ಷದವರ ಆಚರಣೆಯನ್ನು ವಿಮರ್ಶಿಸುತ್ತಿದ್ದಾಗ ತಮ್ಮ ಸ್ಕೌಟ್‌ಗಳು ನಿಜವಾಗಿಯೂ ಸ್ವಂತವಾಗಿ ತಾವೇ ಹೋಗಿ ಸಮಾಚಾರವನ್ನು ಸಂಗ್ರಹಿಸಿದ್ದರೋ ಅಥವಾ ಹೊರ ಠಾಣ್ಯಗಳ ವಿಷಯದಲ್ಲಿ ಸುಮ್ಮನೆ ಊಹೆಯಿಂದ ಹೇಳುತ್ತಿದ್ದರೋ ಎಂಬ ಅನುಮಾನವು ಅವರಿಗಿದ್ದಂತೆ ಸೂಚನೆ ತೋರಿತು. ಏಕೆಂದರೆ ಆ ಸ್ಥಳಗಳಿಗೆ ಯಾರೂ ಹೋಗಲಾರರೆಂದು ಎದುರು ಪಕ್ಷದವರು ಹೇಳಿದರು. ತಮ್ಮ ಕೈಚೀಲವನ್ನಿಟ್ಟಿದ್ದ ಸ್ಥಳವನ್ನು ಹೋಗಿ ನೋಡಿದರೆ ಎಲ್ಲವೂ ತಿಳಿದುಬರುವುದೆಂದು ಹೇಳಿ ಬೇಡನ್ ಪೊವೆಲ್ ತಮ್ಮ ಕಡೆಯವರ ಸಾಹಸ ಕೆಲಸವು ನಿಜವೆಂದು ಸ್ಥಾಪಿಸಿದರು.

## ತಂಬಾಕು ಸೇವನೆ

ಬೇಡನ್ ಪೊವೆಲ್ ಮೊದಲು ಚುಟ್ಟಾ ಸೇದುತ್ತಿದ್ದರು. ಈ ವಿಷಯದಲ್ಲಿ ಕೆಲವು ಸರಸವಾದ ವಿಷಯಗಳಿವೆ. ಹದಿನೈದನೆಯ ಶತಮಾನದ ಕೊನೆಯಲ್ಲಿ ಕೊಲಂಬಸ್ (Colombus) ಎಂಬ ಸ್ಪೈಯಿನ್ ದೇಶದವನು ಅಮೇರಿಕಾ ದೇಶದ ಬಳಿ ಕ್ಯೂಬ (Cuba) ದ್ವೀಪದಲ್ಲಿ ಮೊದಲು ಹೋಗಿ ಇಳಿದಾಗ ಸುತ್ತಲೂ ನೋಡಿಕೊಂಡು ಬನ್ನಿ ರೆಂದು ಇಬ್ಬರು ನಾವಿಕರನ್ನು ಕಳುಹಿಸಿದನು. ಹಿಂತಿರುಗಿ ಬಂದು ಅಲ್ಲಿನ ಜನರು ಸಣ್ಣ ಪಂಜುಗಳನ್ನು ಬಾಯಲ್ಲಿಟ್ಟು ಕೊಂಡು ಹೊಗೆಯನ್ನು ಬಿಡುತ್ತಿರುವರೆಂದು ಅವರು ಹೇಳಿದರು. ಕೆಲವು ವರ್ಷಗಳ ಮೇಲೆ ನಿಕೋಟ್ (Nicot) ಎಂಬ ಫ್ರೆಂಚನು ಯುರೋಪಿಗೆ ಹೊಗೆಯ ಸೊಪ್ಪಿನ ಬೀಜಗಳನ್ನು ತಂದು ಬಿತ್ತಿದನು. ಅನಂತರ ಇದು ಯುರೋಪಿನಲ್ಲೆಲ್ಲಾ ಹರಡಿತು. ಇಂಗ್ಲೆಂಡಿನಲ್ಲಿ ಚುಟ್ಟಾ ಸೇದುವುದು ಆರಂಭವಾದ ಸಂದರ್ಭದಲ್ಲಿ ಒಂದು ಹಾಸ್ಯ ಸಂಗತಿ ನಡೆಯಿತು. ಇಂಗ್ಲಿಷ್ ನಾವಿಕ ಸರ್ ವಾಲ್ಟರ್ ರ್‍ಯಾಲೇ (Sir Walter Raleigh) ಎಂಬುವರು ತಮ್ಮ ಬಂಗಲೆಯಲ್ಲಿ ಮೊದಲು ಚುಟ್ಟಾ ಸೇದುತ್ತಾ ಕುಳಿತಿದ್ದರು. ಅವರ ಬಾಯಿಯಿಂದ ಹೊಗೆಯು ಬರುತ್ತಿತ್ತು. ಇದನ್ನು ನೋಡಿ ತನ್ನ ಯಜಮಾನರಿಗೆ ಬೆಂಕಿ ಹತ್ತಿರುವುದೆಂದು ಹೆದರಿ ಅವರ ಸೇವಕನು ಓಡಿ ಹೋಗಿ ಬೆಂಕಿಯನ್ನಾರಿಸಬೇಕೆಂದು ಒಂದು ಕೊಡದ ತುಂಬಾ ನೀರನ್ನು ತೆಗೆದುಕೊಂಡು ಅವರ ಮೇಲೆ ಹೊಯ್ದನು. ತಂಬಾಕು ಸೇದುವುದರಿಂದ ದೇಹಕ್ಕೆ ಅಪಾಯವುಂಟಾಗುವುದೆಂದು ಇತ್ತೀಚೆಗೆ ತಿಳಿದು ಬಂದಿದೆ. ತುರ್ಕಿ ದೇಶದಲ್ಲಿ ಚುಟ್ಟಾ ಸೇದುವುದನ್ನು ತಪ್ಪಿಸಬೇಕೆಂದು ಅಲ್ಲಿನ ಸುಲ್ತಾನರು ವಿಚಿತ್ರವಾದ ಆಜ್ಞೆ ಮಾಡಿದರು. ಯಾರಾದರೂ ಚುಟ್ಟಾ ಸೇದುತ್ತಿದ್ದರೆ, ಅವನನ್ನು ಹಿಡಿದು ಅವನ ಮೂಗಿನಲ್ಲಿ ಒಂದು ತೂತನ್ನು ಕೊರೆದು ಆ ತೂತಿನಲ್ಲಿ ಅವನ ಹೊಗೆಯ ಬತ್ತಿಯ ಚಿಲುಮೆಯನ್ನು ಸಿಕ್ಕುವುದು. ಹೀಗೆ ಮಾಡುವುದರ ಮೂಲಕ ಇತರರಿಗೆ ಚುಟ್ಟಾ ಸೇದಕೂಡದೆಂದು ಎಚ್ಚರಿಸಿದಂತಾಗುತ್ತಿತ್ತು. ಶತ್ರುಗಳು ಇಳಿದುಕೊಂಡಿರುವ ಸ್ಥಳಗಳನ್ನು ಕಂಡುಹಿಡಿದು, ಮೆಲ್ಲಗೆ ಅವರನ್ನು ದಾಟಿಕೊಂಡು ಅಂಬೆಗಾಲಿನ ಮೇಲೆ ಹೋಗಲು ಘ್ರಾಣಶಕ್ತಿಯು ಸೂಕ್ಷ್ಮವಾಗಿದ್ದಷ್ಟೂ ಪ್ರಯೋಜನಕಾರಿಯಾದುದೆಂದು ಬೇಡನ್ ಪೊವೆಲ್ ಅಮೇರಿಕಾ ದೇಶದ ಸ್ಕೌಟ್‌ಗಳಿಂದ ಕಲಿತರು. ಹೊಗೆ ಬತ್ತಿಯನ್ನು ಸೇದಿದರೆ ಘ್ರಾಣ ಶಕ್ತಿಯ ಸೂಕ್ಷ್ಮತೆಯನ್ನು ಹಾಳು ಮಾಡುವುದೆಂದು ತಿಳಿದು ಅದನ್ನು ಸೇದುತ್ತಿರಲಿಲ್ಲ.

ಕಾಶ್ಮೀರದಲ್ಲಿದ್ದಾಗ ಬೇಡನ್ ಪೊವೆಲ್ ಒಂದು ಹಳ್ಳಿಗೆ ಹೋಗಿದ್ದರು. ಅಲ್ಲಿ ಒಂದು ಗುಡಿಸಲು. ಅದರಲ್ಲಿ ಹಳ್ಳಿಯ ಮುದುಕರೂ ಇತರರೂ ತಮ್ಮ ಕೆಲಸಗಳನ್ನೆಲ್ಲಾ ಮುಗಿಸಿಕೊಂಡು ಸಂಜೆಯಾದ ಮೇಲೆ ಒಂದೆಡೆ ಸೇರುತ್ತಿದ್ದರು. ಆಗ ಈ ಮುದುಕರು ತಮ್ಮ ಪಡೆಯ ಮತ್ತು ತಮ್ಮ ಊರಿನ ಚರಿತ್ರೆಗಳನ್ನು ಬಹು ಸ್ವಾರಸ್ಯವಾಗಿ ವರ್ಣಿಸುತ್ತಾ ಎಲ್ಲರಿಗೂ ಬಹು ಆನಂದವನ್ನುಂಟು ಮಾಡುತ್ತಿದ್ದರು. ಇದನ್ನು ಮಾದರಿಯಾಗಿ ಇಟ್ಟುಕೊಂಡೇ ಸ್ಕೌಟ್‌ಗಳೂ ತಾವು ಒಟ್ಟುಗೂಡಿದೆಡೆ ತಮ್ಮ ದೇಶೀಯ ಸೋದರರ ಅದ್ಭುತ ಸಾಹಸದ ಕಾರ್ಯಗಳನ್ನು ವರ್ಣಿಸುತ್ತ ಮತ್ತು ಕೇಳುತ್ತ ಇದ್ದರೆ, ಅದೇ ರೀತಿ ಉತ್ಸಾಹ ಧೈರ್ಯಗಳಿಂದ ಕೂಡಿ ತಾವೂ ಸಾಹಸ ಕಾರ್ಯಗಳನ್ನು ಮಾಡಬೇಕೆಂಬ ಭಾವನೆಯು ಚೆನ್ನಾಗಿ ಮನದಲ್ಲಿ ನೆಲೆಸುವುದೆಂದು ಬೇಡನ್ ಪೊವೆಲ್ ಅರಿತು ತಮ್ಮ ಸ್ಕೌಟ್ ಸಂಸ್ಥೆಯ ಕಾರ್ಯಕ್ರಮದಲ್ಲಿ ಇದನ್ನು ಸೇರಿಸಿರುವರು.

(ಮುಂದುವರಿಯುವುದು)

ಸಂಕ್ಷೇಪಿಸಿದವರು : **ಕೆ. ಬಿ. ರಾಜಶೇಖರ್**

## ಶೈಕ್ಷಣಿಕ ಪ್ರವಾಸ

'ಮಗುವಿನ ಬೌದ್ಧಿಕ ವಿಕಾಸಕ್ಕೆ ಶೈಕ್ಷಣಿಕ ಪ್ರವಾಸ ಅತ್ಯಂತ ಅವಶ್ಯ' ಎಂಬ ಘನ ಉದ್ದೇಶದಿಂದ ಗುಳೇದಗುಡ್ಡದ ಸರ್ಕಾರಿ ಮಾಧ್ಯಮಿಕ ಶಾಲೆಯ ಸಿಂಹ ದಳದ ಸ್ಕೌಟ್‌ಗಳು ಮತ್ತು ಶಾಲಾ ಮಕ್ಕಳು ಸ್ಕೌಟ್ ಮಾಸ್ಟರ್ ಬಿ. ಡಿ. ಕರಣಿ ಅವರ ಜೊತೆಗೆ ಫೆ. ೧೨ ರಿಂದ ೧೫ ರವರೆಗೆ ಬೆಂಗಳೂರು, ನಂದಿ ಬೆಟ್ಟ, ಮೈಸೂರು, ಚಾಮುಂಡಿಬೆಟ್ಟ, ಕೃಷ್ಣರಾಜ ಸಾಗರ, ಶ್ರವಣಬೆಳಗೊಳ, ಬೇಲೂರು, ಹಳೇಬೀಡು, ಧರ್ಮಸ್ಥಳ, ಮಂಗಳೂರು ಮತ್ತು ಉಡುಪಿಗಳನ್ನು ಭೇಟಿಮಾಡಿ ಪ್ರೇಕ್ಷಣೀಯ ಸ್ಥಳಗಳನ್ನು ವೀಕ್ಷಿಸಿದರು ಗುರುಗಳ ವಿವರಣೆಯಿಂದ ಮಕ್ಕಳಿಗೆ ಪ್ರವಾಸದ ಉದ್ದೇಶ ಮನವರಿಕೆಯಾಗಿದೆ.

# ಕಾಡನ್ನು ಪರಿಚಯಿಸುವುದು

(ಕೆನಡ ರಾಷ್ಟ್ರದ 1986 ಅಕ್ಟೋಬರ್‌ನ "ದಿ ಲೀಡರ್" ಸ್ಕೌಟ್ ಮಾಸ ಪತ್ರಿಕೆಯಿಂದ)

ಲೇಖಕರು: ಎಲೇನ್ ಹನ್ನಾ

ಕೆನಡ ದೇಶದ ಮರಿಗಳ ಶಿಕ್ಷಣದಲ್ಲಿ ಇನ್ನೂ ಕೂಡ ನಾವೇಕೆ "ಕಾಡನ್ನು ವಸ್ತು" ವಾಗಿ ಬಳಸುತ್ತಿದ್ದೇವೆ? ಇದರಿಂದ ಯಾವ ಉಪಯೋಗ ಸಾಧನೆ ಆಗುತ್ತದೆ? ಈ ಪ್ರಶ್ನೆಗಳನ್ನು ಹಿಂದಿನ ನಾಯಕರು ಅನೇಕ ವೇಳೆ ತಮಗೆ ಶಿಕ್ಷಣ ನೀಡುವವರನ್ನೋ ತಜ್ಞ ಸೇವಾ ತಂಡದ ವರನ್ನೋ ಕೇಳುತ್ತಾರೆ.

ಆಂಟೇರಿಯೋ ರಾಜ್ಯದ ಒಂದನೆ ಆ್ಯಕ್ಟನ್ ಮರಿಗಳ ಹಿಂಡಿನ ನಾಯಕನೂ ಆಗಿರುವ ಉತ್ತರ ಹಾಲ್ಟನ್ ಮರಿಗಳ ಸೇವಾ ತಂಡದ ತಜ್ಞನಾಗಿರುವ ಜಾನ್‌ಡಿಬ್ಲೊ ಬಳಿ ಇದರ ಉತ್ತರವಿದೆ. ಇತ್ತೀಚಿನ "ಕಾಡಿನ ಕತೆಗಳು" ಕುರಿತ ಕಾರ್ಯಾಗಾರದಲ್ಲಿ ಹಿಂಡಿನ ಸ್ಕೌಟರುಗಳೊಡನೆ ತನ್ನ ಅನಿಸಿಕೆಗಳನ್ನು ಹಂಚಿಕೊಂಡ ಈತನು ಆ ಬಳಿಕ ಮೇಳವಿಸಿದ್ದ ಸ್ಕೌಟಿಂಗಿನ ನಾನಾ ಶಾಖೆಗಳ ನಾಯಕ ರಿಗೂ ಇದನ್ನು ಮನವರಿಕೆ ಮಾಡಿಕೊಟ್ಟನು.

## ಭಾಗ ಒಂದು

ಮರಿಗಳಿಗೆ "ಕಾಡನ್ನು ಪರಿಚಯಿಸುವ ವಸ್ತು" ವನ್ನು ಸ್ಕೌಟರ್ ಜಾನ್ ಎರಡು ಭಾಗ ಮಾಡಿಕೊಂಡಿದ್ದಾನೆ. "ಕಾಡಿನ ಕತೆಗಳು" ಮತ್ತು ಅವುಗಳಲ್ಲಿನ ಕೆಲವು ಪ್ರಧಾನ ಪಾತ್ರಗಳು ಇವನ್ನು ಮರಿಗಳಿಗೆ ಪರಿಚಯಿಸಲು ಜಾನ್ ಈ ಪುಸ್ತಕದ ಮೊದಲಿನಿಂದ ಓದುತ್ತಾ ಮನು ಷ್ಯನ ಮಗು ಸಾಗ್ಲಿಯನ್ನು ತೋಳಗಳು ತಮ್ಮ ಹಿಂಡಿಗೆ ಸೇರಿಸಿಕೊಳ್ಳುವಲ್ಲಿಗೆ ನಿಲ್ಲಿಸುತ್ತಾನೆ. ತರುವಾಯ, ತಾನೇ ಸೃಷ್ಟಿಸಿರುವ "ಚೀಲ್ ಆಟ" ವನ್ನು ಮರಿಗಳು ಆಡಲು ಬಿಡುತ್ತಾನೆ. ಈ ಆಟದ ಮೂಲಕ ಮರಿಗಳು "ಕಾಡಿನ ಕತೆಗಳು" ಕೇಳುತ್ತಿದ್ದಾಗಿನ ವನ ಜೀವಿಗಳ ಪಾತ್ರಗಳನ್ನು ಅವವುಗಳ ಆಕಾರದೊಡನೆ ಹೊಂದಿಸಿ ಅವುಗಳಿಗೆ ಜೀವ ತುಂಬಿ ಕೊಳ್ಳುತ್ತಾರೆ. ಇದನ್ನು ಆಡುತ್ತಿರುವ, ಬಳಸುತ್ತಿರುವ, ಹಿಂಡುಗಳಲ್ಲಿ ಈ ಆಟ ತುಂಬ ಪ್ರಿಯವಾಗಿದೆ. ಆ ಮುಂದೆಯೂ ಸಹ ಈ "ವನ ವಸ್ತು" ಅವರ ಮನಸ್ಸಿನಲ್ಲಿ ಭದ್ರವಾಗಿ ಬೆಳೆಯು ತ್ತಲೇ ಇರುತ್ತದೆ.

## ಚೀಲ್ ಆಟ

ಷಟ್ಕದ ಎಲ್ಲ ಮರಿಗಳೂ ಸೇರಿ, "ಕಾಡಿನ ಕತೆ"ಗಳ ಪ್ರಾಣಿಗಳ ಚಿತ್ರಗಳಿರುವ ಒಂದೊಂದು ಹಲಗೆಯನ್ನು ಮುಂದಿರಿಸಿಕೊಳ್ಳುತ್ತಾರೆ. ಎಲ್ಲರಿಗೂ ಕೂಡಿದಂತೆ 53 ಕಾರ್ಡುಗಳ ರಾಶಿ ಎಲ್ಲರಿಗೂ ನಡುವೆ ಇರುತ್ತದೆ. ಕಾರ್ಡುಗಳಲ್ಲಿ ಪ್ರಾಣಿಗಳ ಹೆಸರನ್ನು ಮಾತ್ರ ಬರೆದಿರು ತ್ತದೆ. ಮೌಗ್ಲಿ, ಆಕೇಲ, ರಕ್ಷಾ (ತೋಳವ್ವ), ತೋಳ ರಾಯ, ತಬಾಕಿ, ಷೇರಾಖಾನ್, ಬಾಲು, ಬಾಘೀರ, ಕಾ, ಚೀಲ್, ಹಾತಿ, ಬೂದಣ್ಣ, ಬಾಂದರ್‌ಲೋಗ್ ಇವೇ ಆ ಹೆಸರುಗಳು. ಮರಿಗಳ ಮುಂದಿರುವ ಹಲಗೆ ಗಳಲ್ಲಿ ಈ 13 ಪ್ರಾಣಿಗಳಲ್ಲಿ ಯಾವುದಾದರೂ ಆರು—ಆರರಂತೆ (ಆದರೆ ಪ್ರತಿ ಹಲಗೆಗೂ ಭೇದ ಕಾಣಿ ಸುವಂತೆ) ಚಿತ್ರಗಳನ್ನು, ಸ್ಪಷ್ಟವಾದ ದಪ್ಪಗೆರೆಯಿಂದ ಆಗಲಿ ಬಣ್ಣ ತುಂಬಿ ಆಗಲಿ ಕಾಣಿಸಿರಬೇಕು.

ನಮ್ಮ ಪರಿಚಯದವರಲ್ಲಿ ಲಕ್ಷಣವಾಗಿ ಚಿತ್ರಿಸಬಲ್ಲ ಯಾರ ಕೈಲಾದರೂ ಈ ಹದಿಮೂರು ಪ್ರಾಣಿಗಳ ಚಿತ್ರ ಬಿಡಿಸಿಸಿದ ಹಲಗೆ (ದಪ್ಪ, ಮಂದ, ಕಾಗದವಾದರೂ ಸಾಕು, ಅಥವಾ ಸ್ಲ್ಯಾಡ್ ಬೋರ್ಡ್) ಯಲ್ಲಿ ಒಂದನ್ನು ಸಿದ್ಧಪಡಿಸಿದರೆ ಸಾಕು. ಇದರಿಂದ ಸುಲಭವಾಗಿ ಎಷ್ಟಾದರೂ "ಜೆರಾಕ್ಸ್" ಪ್ರತಿಗಳನ್ನು ಮಾಡಿಕೊಳ್ಳ ಬಹುದು. ಎಷ್ಟು ಮರಿಗಳಿದ್ದರೆ ಅಷ್ಟೂ (ಬೋರ್ಡು) ಹಲಗೆಗಳು ಬೇಕು, ಪ್ರತಿ ಹಲಗೆಯಲ್ಲೂ ಆರು ಪ್ರಾಣಿ ಗಳ ಚಿತ್ರಗಳು. ಪ್ರಾಣಿಗಳ ಜೋಡಣೆ ಮಾತ್ರ ಬೇರೆ ಬೇರೆ.

ಹಲಗೆ ನಿರ್ಮಾಣ ಆಯಿತು. ಕಾರ್ಡುಗಳನ್ನು ಮಾಡುವುದು ಸುಲಭ. 2"×3" ಕಾರ್ಡುಗಳ ಮೇಲೆ ಒಂದೊಂದು ಪ್ರಾಣಿಗೆ ನಾಲ್ಕರಂತೆ ಹೆಸರುಗಳನ್ನು ಬರೆದರೆ ಆಯಿತು. 13×4 ಸೇರಿ 52 ಕಾರ್ಡುಗಳಾಗುತ್ತವೆ. ಇನ್ನೊಂದು 53 ನೇ ಕಾರ್ಡನ್ನು ಹೆಚ್ಚುಗೆಯಾಗಿ ಸೇರಿಸಿ, ಅದರ ಮೇಲೆ ಬಿ. ಪಿ. ಚಿತ್ರ (ಬೇಡನ್ ಪೊವೆಲ್‌ದು) ಬಿಡಿಸಿದರಾಯಿತು.

ಮುಂದೆ ಹಲಗೆ ಪಡೆದಿರುವ ಪ್ರತಿ ಮರಿಯೂ, ನಡುವೆ ಇರುವ 53 ಕಾರ್ಡುಗಳ ರಾಶಿಯಿಂದ ಸರದಿಯಂತೆ ಒಂದೊಂದು ಕಾರ್ಡು ತೆಗೆದು ನೋಡುತ್ತಾನೆ. ಕಾರ್ಡಿನಲ್ಲಿನ ಹೆಸರು ಬೋರ್ಡಿನ ಯಾವ ಚಿತ್ರಕ್ಕಾದರೂ ಹೊಂದುವಂತಿದ್ದರೆ, ಆ ಚಿತ್ರದ ಮೇಲೆ ಆ ಕಾರ್ಡನ್ನು ಇಡುತ್ತಾನೆ. ಯಾವ ಚಿತ್ರಕ್ಕೂ ಹೊಂದಲಿಲ್ಲವಾದರೆ ಅದನ್ನೇ ಬೇರೆ ರಾಶಿಗೆ ಸೇರಿಸುತ್ತಾನೆ. ಬಿ. ಪಿ. ಕಾರ್ಡು ಕೈಗೆ ಬಂದರೆ ಅದನ್ನು ಯಾವ ಚಿತ್ರದ ಮೇಲೆ ಆದರೂ ಇರಿಸಬಹುದು. ತನ್ನ ಹಲಗೆಯ ಆರು ಚಿತ್ರಗಳನ್ನು ಯಾರು ಮೊದಲು ಮುಚ್ಚಿ ಮುಗಿಸುವರೋ ಆ ಮರಿ ಗೆದ್ದಂತೆ !

ಒಂದು ವೇಳೆ ಯಾರೂ ತಮ್ಮ ಹಲಗೆಯನ್ನು ಪೂರ್ತ ಮುಚ್ಚದೆಯೇ ಮಧ್ಯೆರಾಶಿಯ ಕಾರ್ಡುಗಳ ಕರಗಿ ಹೋದರೆ, ಎರಡನೆಯ ರಾಶಿಯಾಗಿರುವ ಕಾರ್ಡುಗಳನ್ನು ಪುನಃ ಕಲೆಯಿಸಿ ಆಟವನ್ನು ಮುಂದುವರಿಸಬಹುದು.

### ಸರದಿ ಆಟ

ಇದೇ ಆಟವನ್ನೇ ಆರು ತಂಡಗಳವರಿವಿಗೂ ಸರದಿ ಆಟವಾಗಿ ಆಡಬಹುದು. ಹೀಗೆ ಆಡಲು (ಪ್ರತಿ ಮರಿಗೆ ಬದಲು) ಪ್ರತಿ ತಂಡಕ್ಕೆ ಒಂದರಂತೆ ಹಲಗೆ ಸಾಕು, ಸರದಿಯಂತೆ ಒಂದೊಂದು ತಂಡದಿಂದ ಒಬ್ಬೊಬ್ಬ ಮರಿ ಕಾರ್ಡನ್ನು ತೆಗೆದು ಮುಂದುವರಿಯಬಹುದು. ಯಾವ ತಂಡವು ಆ ಚಿತ್ರಗಳನ್ನು ಮೊದಲು ಮುಟ್ಟುವುದೋ ಆ ತಂಡ (ಷಟ್ಕ) ಗೆದ್ದಂತೆ !

### ಭಾಗ ಎರಡು

ಮರಿಗಳಿಗೆ ಕಾಡನ್ನು ಪರಿಚಯಿಸುವ ಎರಡನೆಯ ಭಾಗವಾಗಿ ಎಲ್ಲ ಮರಿಗಳನ್ನೂ ತನ್ನ ಸುತ್ತ ಕೂರಿಸಿಕೊಂಡು ಪ್ರಶ್ನೋತ್ತರ ನಡೆಸುತ್ತಾನೆ. ಸ್ಕ್ಯಾಟರ್ ಜಾ಼ ಈ ಪ್ರಶ್ನೆಗಳನ್ನು ಕೇಳುವಾಗ ಸುತ್ತಲಿನ ಮರಿಗಳು ಜಾ಼ ಹೆಸರಿಸಿದ ಕಾಡಿನ ಕತೆಗಳಲ್ಲಿ ಬರುವ ಪ್ರಾಣಿ, ಸ್ಥಳ, ಪಾತ್ರಗಳ ನಿಜ ಜೀವನದಲ್ಲಿ ಏತಕ್ಕೆ, ಯಾರಿಗೆ, ಎಲ್ಲಿಗೆ ಹೊಂದುತ್ತವೆ ಎಂದು ಚಿಂತಿಸಿ, ಗುರುತಿಸಿ, ಹೇಳಬೇಕು. ನಾನು ನನ್ನ ಹಿಂಡಿನಲ್ಲಿ ಈ ಆಟವನ್ನು ಆಡಿಸುವಾಗ ಕತೆಗಳ ಕಾಡಿಗೂ ಮರಿಗಳ ಮನೆ, ಪರಿಸರ, ನೆರೆಹೊರೆಗೂ ಹೋಲಿಸಿ ನೋಡಲು ಪ್ರೇರಿಸುತ್ತೇನೆ. ಸಾಧಾರಣವಾಗಿ ನನ್ನ ಧಾಟಿ ಹೀಗಿರಬಹುದು :

ನಾವೆಲ್ಲರೂ ಕನ್ನಡಿಯನ್ನು ನೋಡಿದ್ದೇವೆ. ಕನ್ನಡಿಯಲ್ಲಿ ನಮಗೆ ಕಾಣುವ ಪ್ರತಿ ಬಿಂಬವನ್ನೂ ಕಂಡಿದ್ದೇವೆ. ಒಂದು ರೀತಿಯಲ್ಲಿ "ಕಾಡಿನ—ಮೌಗ್ಲಿಯ—ಕತೆಗಳು" ಸಹ ಒಂದು ಕನ್ನಡಿಯೇ. ಈ ಕನ್ನಡಿಯಲ್ಲಿ ಕಾಣುವ ಪ್ರತಿ ಬಿಂಬಗಳು ನಾನೂ, ನೀವೂ, ನಮ್ಮ ಗುರುತಿನ ಜನರೂ, ಸ್ಥಳಗಳೂ, ಸನ್ನಿವೇಶಗಳೂ ಅಷ್ಟೇ. ಹಠಾತ್ತಾಗಿ ಒಬ್ಬ ಮನುಷ್ಯ—ಮಗು ಕಾಡಿಗೆ ಬಂದು ಬಿಟ್ಟಿದ್ದಾನೆ, ಅಲ್ಲಿನ ನಾನಾ ಪ್ರಾಣಿಗಳ ಗುಂಪುಗಳ ಸಂಗಡ ಬೆರೆತು ಅವುಗಳ ಗುಣ, ಬುದ್ಧಿ, ವಿದ್ಯೆ, ಸಾಮರ್ಥ್ಯ ಮುಂತಾದ ರಿಂದ ಪ್ರಭಾವಿತನಾಗಿ ಬೆಳೆಯುತ್ತಾ ಬಾಲಕನಾಗಿ ಕುಮಾರನಾಗಿ ಬಾಳುತ್ತಾನೆ, ನಮ್ಮ ನಿಜ ಜೀವನದಲ್ಲಿ ಕತೆಯ ಕಾಡಿನಲ್ಲಿರುವಂತಹ ಆನೆ, ಹುಲಿ, ಹೆಬ್ಬಾವು, ತೋಳಗಳು ಇಲ್ಲದಿರಬಹುದು. ಆದರೆ ನಾವು ಕ್ಷಣ ಕಾಲ ಮನಸ್ಸಿಟ್ಟು ಯೋಚನೆ ಮಾಡಿದರೆ, ಅಂತಂತಹ ಸ್ವಭಾವದ ಜನರು ನಮ್ಮ ಸುತ್ತಲೂ ಇರುವರೆಂದು ತೋರಬಹುದು...."

ನಿಮ್ಮ ಮನಸ್ಸಿಗೇ ಅಂತಹ ಸಾಮ್ಯ ಯಾವುದಾದರೂ ತೋರೀತೆ, ನೋಡಿ, ಕತೆಯಲ್ಲಿನ ರಕ್ಷಾ (ತೋಳವ್ವ), ತೋಳರಾಯ ಎಂದೊಡನೆ ಯಾರ ಜ್ಞಾಪಕ ಬರುತ್ತದೆ ನಿಮಗೆ ? ಅವುಗಳು ನಮ್ಮ ಮರಿಗಳ ತಾಯಿ ತಂದೆಯರ ನೆನಪು ತರುತ್ತವೆ, ಅಲ್ಲವೆ ? ಕರಡಿ, ಬಾಲೂ ಎಂದರೆ ಯಾರ ನೆನಪು ಬಂತು ? ನಿಮ್ಮ ಸಾರ್‍ರು, ಟೀಚರ್‍ರು ಹೌದೆ ? ಯಾವ ಟೀಚರ್‍ರಿರ ಬಹುದು ? ಹೌದಾ ! ಷೇರ್‌ಖಾನ್, ಆ ಹುಲಿ ! ಅಂಥ ಜನ ಯಾರಿದ್ದಾರೆ ನಮ್ಮ ಕೇರೀಲಿ ? ಇಲ್ಲದಿದ್ದರೆ ಮೊಹಲ್ಲದಲ್ಲಿ, ರೌಡಿ ! ಥು !

